ತಂದ ತನ್ನ ವಸ್ತುಗಳನ್ನು ಪಡೆದುಕೊಂಡು ಸಾಯಂಕಾಲ ಹಕ್ಕಿಯಂತೆ ಮನೆಗೆ ಬಂದಿದ್ದ.

ಮನೆಯಲ್ಲಿ ಕುಮುದಳೂ ಇದ್ದಿರಲಿಲ್ಲ, ಮೋಹನನೂ ಇದ್ದಿರಲಿಲ್ಲ !

ರಾಮಣ್ಣ ಧಿಗ್ಗನೆ ಕುರ್ಚಿಯಿಂದೆದ್ದ. ಹತ್ತು ವರ್ಷಗಳ ಹಿಂದಿನ ಸ್ಮೃತಿ-ಪ್ರವಾಹದಲ್ಲಿ ತಾನು ಸಿಕ್ಕಿಕೊಂಡಿದ್ದನೆಂಬುದರ ಅರಿವು ಅವನಿಗೆ ಇದ್ದಿರಲಿಲ್ಲ ಒಂದು ಕ್ಷಣ. ಸೀರೆ, ಸರಗಳನ್ನು ಹಿಡಿದವನಂತೆ ಕೈಯೆತ್ತಿ ಕೊಂಡು ಕಿಟಕಿಯತ್ತ ನಡೆದು ಬಂದ. ಆಗ ಎಚ್ಚರವಾಯಿತು ಅವನಿಗೆ.

ನನಗೆ ಹುಚ್ಚು ಹಿಡಿಯಲಿಕ್ಕಿಲ್ಲವಷ್ಟೆ ? ಎಂದು ಕೈಯನ್ನು ಇಳಿಬಿಟ್ಟ, ಇಲ್ಲದ ಸೀರೆ ಬಿದ್ದು ಹೊಲಸಾದೀತು ಎಂಬ ಹೆದರಿಕೆಯಿಂದ ಮೆಲ್ಲನೆ ಇಳಿ-ಬಿಟ್ಟ. ನನಗೆ ಹುಚ್ಚು ಹಿಡಿಯಲಿಕ್ಕಿಲ್ಲವಷ್ಟೆ ಎಂದು ಮತ್ತೊಮ್ಮೆ ಪಟಗುಟ್ಟುತ್ತ ತಲೆಯನ್ನು ಜಾಡಿಸಿದ.

ಒಮ್ಮೆಲೆ ನಗೆ ಬಂದಿತು ರಾಮಣ್ಣನಿಗೆ, ಅಂದು ಆ ಸೀರೆಗಾಗಿ ತನಗೆ ಬಂದ ವಿಚಾರವನ್ನು ನೆನೆದು.

ಹುಂ....ಇಂದಿನ ಸಭೆ ಬೇಗನೆ ಸುರುವಾದರೆ ಒಳಿತು, ಇಲ್ಲವಾದರೆ ತನಗೆ ಹುಚ್ಚು ಹಿಡಿಯುವುದು ಖಂಡಿತ ಎಂದುಕೊಂಡ.

ನಾಲಗೆ ವಿಷಯುವನ್ನು ಬದಲಾಯಿಸಲು ಯತ್ನಿಸಿದರೂ ಮನಸ್ಸು ಕೇಳಲಿಲ್ಲ, ಸ್ಮೃತಿಯನ್ನು ಹಿಂಬಾಲಿಸಿಯೆ ಹೊರಟಿತು. ಸ್ಮೃತಿ-ಚಿತ್ರ ಮುಂದೆ ನಿಂತೊಡನೆ ರಾಮಣ್ಣ ಮತ್ತೊಮ್ಮೆ ನಕ್ಕ, ಅಂದು ಆ ಸೀರೆಗಾಗಿ ಬೆಳೆದ ವಿಚಾರವನ್ನು ನೆನೆದು.

೫

ಕುಮುದಳ ಸಿಟ್ಟು ಸೀರೆಯ ಮೇಲೆ ತಿರುಗಿತು. ಮೋಹನನು ಇನ್ನೂ ಬಾರನೆಂಬ ಅಸಮಾಧಾನದ ಸಿಟ್ಟಿನಿಂದ, ಕನ್ನಡಿಯ ಇದಿರು ನಿಂತು ಕೂದಲನ್ನು ಸರಿಪಡಿಸಿಕೊಳ್ಳುವಾಗ ಸೆರಗು ಜಾರಿತು, ಜಾರಿದ ಸೆರಗು ತೋರಿದ ಯೌವನಸಂಪತ್ತನ್ನು ಕಂಡು ಸಿಟ್ಟು ಇನ್ನಿಷ್ಟು ಕೆರಳಿತು, ಪ್ರೀತಿ-

ಯಾಗಿ ಪ್ರತಿಬಿಂಬವನ್ನು ನೋಡಿದಳು, ಉಟ್ಟ ಸೀರೆಗಾಗಿ ತನ್ನ ವ್ಯಕ್ತಿತ್ವಕ್ಕೆಯೆ ಕಳೆ ಏರಿದ್ದನ್ನು ಕಂಡು ಸೀರೆಯ ಮೇಲೆ ಕಿಡಿಕಿಡಿಯಾದಳು.

ಹಾಳು ಸೀರೆ! ಅಂದಿನಿಂದ ಇಂದಿನ ವರೆಗೆ ಕಹಿ ನೆನಪುಗಳಿಂದಲೆ ನೇಯ್ದಂತಿದೆ — ಎನ್ನುತ್ತ ಕನ್ನಡಿಗೆ ಬೆನ್ನು ತಿರುವಿ ಕುಳಿತುಕೊಂಡಳು. ಅಭ್ಯಾಸಬಲಕ್ಕಾಗಿ ತೊಡೆಯ ಮೇಲಿನ ಸೀರೆಯನ್ನು ಸರಿಪಡಿಸಿಕೊಂಡಳು, ತಟ್ಟನೆ ಮೈಲಿಗೆಯಾಯ್ತೆಂಬಂತೆ ಬಿಟ್ಟಳು ....

ಹತ್ತು ವರುಷಗಳ ಹಿಂದಿನ ಮಾತು. ಬೆಳಿಗ್ಗೆ ರಾಮಣ್ಣ ಕೈ-ಗಡಿಯಾರವನ್ನು ಕೊಟ್ಟಿದ್ದ, ಅಲ್ಲ, ಕೈಮುಟ್ಟಿ ಕಟ್ಟಿದ್ದ. ಆಗ ಒಂದು ಕ್ಷಣ, ಅವನ ಕೈಯನ್ನು ಹಿಡಿದೆಳೆಯಬೇಕೆನ್ನಿಸಿತ್ತು, ಹಿಂದಿನದೆಲ್ಲವನ್ನು ಮರೆತು ಒಮ್ಮೆ, ಆಯುಷ್ಯದಲ್ಲಿ ಕೊನೆಯ ಸಲ, ಮೈಗೆ ಮೈ ಸಮರಸವಾಗುವಂತೆ ಅಪ್ಪಿಕೊಳ್ಳಬೇಕೆನ್ನಿಸಿತ್ತು, ಅಷ್ಟರಲ್ಲಿ ರಾಮಣ್ಣ ಕೈಬಿಟ್ಟು ಹೊರಬಿದ್ದಿದ್ದ, ತಾನು ಪ್ರೇಮಾವೇಶದ ಭೂತದಂತೆ ಮಲಗಿದ ಮೋಹನನನ್ನು ಮುದ್ದೆಯಾಗುವಂತೆ ತಬ್ಬಿಕೊಂಡಿದ್ದಳು, ಆಗ ಎಚ್ಚರವಾದಂತಾಗಿತ್ತು ತನಗೆ. ಇನ್ನು ಈ ಮನೆಯಲ್ಲಿ ಉಳಿದರೆ ತಾನು ರಾಮಣ್ಣನ ವಶಳಾಗುವುದು ಖಂಡಿತ, ಆ ಅವಮಾನವನ್ನು ಸಹಿಸಲಾಗದು, ಅಲ್ಲಿಂದ ಹೊರಡಲೇಬೇಕು ಎಂದು ನಿಶ್ಚಯಿಸಿದ್ದಳು. ಕಾದ ಕಬ್ಬಿಣದಂತಾಗಿತ್ತು ತನ್ನ ದೇಹ. ಯಾವುದರ ಸ್ಪರ್ಶವಾದರೂ ನಡುಗುತ್ತಿತ್ತು. ತಾನು ಅಲ್ಲಿಂದ ಹೊರಡಲೇಬೇಕು, ಹೊರಡಲೇ ಬೇಕು—

ಹತ್ತು ವರ್ಷಗಳ ತರುವಾಯ ಇಂದಿಗೂ ಕುಮುದಳಿಗೆ ಈ ಗೂಢ ಬಿಟ್ಟಿರಲಿಲ್ಲ. ಒಂದೆಡೆ ಅಗಾಧವಾದ ಪ್ರೇಮ, ಇನ್ನೊಂದೆಡೆ ಅಷ್ಟೆ ಅಗಾಧವಾದ ದ್ವೇಷ. ಯಾಕೆ? ಒಮ್ಮೊಮ್ಮೆನ್ನಿಸುವುದು ರಾಮಣ್ಣನದಲ್ಲ, ಎಲ್ಲ ತಪ್ಪು ತನ್ನದೆ ಎಂದು. ಅಂತಹ ಸಮಯದಲ್ಲಿ ಸರಳಕ್ಕನ ನೆನಪು ಬಂದು ಕುಮುದಳಿಗೆ ತನ್ನ ನಡತೆ ಎಂದರೆ ಅಕ್ಕನಿಗೆ ದ್ರೋಹ ಎನ್ನಿಸುತ್ತಿತ್ತು.

ಎಷ್ಟು ಸಲ ಹೇಳುತ್ತಿರಲಿಲ್ಲ ಸರಳಕ್ಕ? ಒಮ್ಮೊಮ್ಮೆ ರಾಮಣ್ಣ ಮನೆಗೆ ಬಾರಲು ತಡವಾದರೆ ಕೇಳುತ್ತಿದ್ದಳು.

"ಇವರು ಮನೀಗೆ ಬರೋದು ಎಷ್ಟು ತಡ, ಅಕ್ಕಾ?"

"ತಡ ಎಲ್ಲಿಂದ ಬಂದಿತ? ಅವರು ಬರೋ ಹೊತ್ತೇ ಅದು."

"ಅಲ್ಲ, ಸರಳಕ್ಕಾ, ನೀನು ಒಬ್ಬಾಕೆ ಮನೇವಳಗ—"

"ಆದ್ರೇನಾಯ್ತು ? ನನ್ನ ಕೆಲಸ ನನಗಿರ್‍ತದ—"

"ಅಲ್ಲ, ಅಕ್ಕಾ, ನೀನು ಜಡ್ಡಿನಾಕೆ ಅಂತಾದ್ರೂ—"

"ಅಯ್ಯ, ಹುಡುಗಿ ನೀ, ಕುಮುದಾ ನಾಳೆ ಮದುವೆ ಆಯ್ತು ಅಂದ್ರ ನಿನಗೂ ತಿಳಿದೀತು. ಗಂಡಸಿನ ಕೆಲಸ ಹೊರಗೆ."

"ಹೆಂಡತಿಗೆ ವೈಯಲ್ಲಿ ಗುಣ ಇಲ್ಲ ಅಂತಾದರೂ — "

"ನೋಡು, ಕುಮುದಾ, ಗಂಡಸಿನ ಸ್ವಭಾವ ಅದು, ಮನೇ ಹೊರಗ ಕೆಲಸ, ಮನೇ ಬಿಟ್ಟು ಅಡ್ಡಾಡೋದು. ಹೆಂಗ್ಸಿನ ಮಾತೇ ಬ್ಯಾರೆ, ತಾನಾಯ್ತು, ತನ್ನ ಮನೀ, ತನ್ನ ಮಕ್ಕಳು, ಕೆಲಸ-ಬೊಗಸೆ—ಇದನ್ನೆಲ್ಲಾ ಹ್ಯಾಗೆ ಬಿಡ್ಲಿಕ್ಕೆ ಬರೋದು ಹೆಂಗ್ಸಿಗೆ ?"

ಸರಳಕ್ಕನ ಸಹನ ಸ್ವಭಾವಕ್ಕೆ ಬೆರಗಾಗುತ್ತಿದ್ದಳು ತಾನು. ರಾಮಣ್ಣ ತನ್ನನ್ನು ಅಲಕ್ಷ್ಯ ಮಾಡುವನೆಂದರೂ ಆಕೆಗೆ ಅಸಮಾಧಾನವಿದ್ದಿರಲಿಲ್ಲ.

"ಗಂಡು ಜೀವನ. ನಾಲ್ಕು ಮಂದೀವಳಗ ಕಲ್ತು ಹರಟೀ ಹೊಡೆ-ದ್ರೇನಾಯ್ತು ? ಯಾರು ? ಇವರ ಸಲುವಾಗಿ ಅಂತೀಯಾ ? ಪಾಪ ! ಅವರು ಹೊರಗೆ ಹೋಗೋದೇ ಅಪರೂಪ. ಓದೋದಾಯ್ತು, ಬರೆಯೋದಾಯ್ತು. ಯಾವಾಗಾದ್ರೊಮ್ಮೆ ಬ್ಯಾಸರಿಕೆ ಬಂದಾಗ ಒಂದು ಗಳಿಗೆ ಹೆಚ್ಚೊತ್ತು ಹೊರಗಿದ್ದು ಬರ್‍ತಾರ." ಎಂದು ರಾಮಣ್ಣನನ್ನು ಆಕೆ ಅಭಿಮಾನದಿಂದ ಸಮರ್ಥಿಸುತ್ತಿದ್ದಳು.

"ಹೊರಗ ಹೋದಾಗಿನ ಮಾತಂತೂ ಬಿಡು. ಮನೀವಳ್ಗ ಇದ್ದಾಗ ಸಹಿತ ತಾಸು-ತಾಸುಗಟ್ಲೆ ನಾನು ಮನೀವಳಗ ಇದ್ದೀನೊ ಇಲ್ಲೊ ಅನ್ನೋ ಎಚ್ಚರ ಇರೋದಿಲ್ಲ ಅವರಿಗೆ. ಬರೆಯೋದ್ರೊಳಗ ಗುಂಗ ಆಗಿ ಹೋಗಿರ್‍ತಾರ ಅಷ್ಟು ಪರಿ" ಎನ್ನುವಾಗ ಸರಳಕ್ಕನ ನೀರಕ್ತ ಕೆನ್ನೆಗಳು ಅಭಿಮಾನದಿಂದ ಕೆಂಪೇರಿರುತ್ತಿದ್ದುವು.

"ಇಂಥವ್ರಿಗೆ ಹೆಂಡತಿ ಇದ್ದರೂ ಅಷ್ಟೆ, ಬಿಟ್ಟರೂ ಅಷ್ಟೆ" ಎಂದು ತಾನೇ ಒಮ್ಮೆ ತಾತ್ಸಾರವಾಗಿ ನುಡಿದಿದ್ದಳು ಕುಮುದ.

"ಅಯ್ಯ! ಹುಚ್ಚೀ ! ನಮ್ಮದು ನಾವು ಹೇಳಿಕೊಳ್ಳಬಾರದು. ಆದರೆ

ನಾಸಿದ್ದಿದ್ದಿಲ್ಲ ಅಂದ್ರ ಒಂದು ಕ್ಷಣ ಚೈನ ಬೀಳೋದಿಲ್ಲ ಅವರಿಗೆ. ಒಮ್ಮೇ ಒಮ್ಮೆ ಒಂದು ತಿಂಗಳ ತವರ್‍ಮನೀಗೆ ಹೋಗಿದ್ದೆ, ಮದುವೆ ಆದ ಹೊಸತಾಗಿ. ಆ ಇಡೀ ತಿಂಗಳೊಳಗ ಒಂದು ಅಕ್ಷರ ಬರೆದಿದ್ದಿಲ್ಲ ಪುಣ್ಯಾತ್ಮರು" ಎಂದು ಅದೆಷ್ಟು ಸಂತೋಷದಿಂದ ಹೇಳಿದ್ದಳು ಸರಳಕ್ಕ !

"ಇಂಥಾ ಸುಖದ ಸಂಸಾರ ನನ್ನದು ಅಂತಲೇ ಮುತ್ತೈದೆತನದೊಳಗ ಸಾಯ್ಬೇಕು ಅಂತ ನನ್ನ ಹಟ" ಎಂಬ ಅಕ್ಕನ ಮಾತಿಗಾಗಿ ತಾನು ತಡೆಯುದಾಗಿ ಅತ್ತಿದ್ದಳು.

ಅದೇ ರಾಮಣ್ಣನಲ್ಲವೆ ಈಗಲೂ ? ಆ ರಾಮಣ್ಣ ತನಗೆ ಪೂರ್ತಿಯಾಗಿ ಗೊತ್ತಿರಲಿಲ್ಲವೆ ? ಗೊತ್ತಿದ್ದೆ ತಾನು ಅವನನ್ನು ಮೆಚ್ಚಿರಲಿಲ್ಲವೆ ?

ಆದರೇನು ? ಆ ರಾಮಣ್ಣ ತನ್ನವನಾಗಲಿಲ್ಲ, ತನ್ನವನಾಗಿಲ್ಲ ಎಂಬ ವಿಚಾರ ಕುಮುದಳ ಮನಸ್ಸಿನಲ್ಲಿ ದೃಢವಾಗಿತ್ತು. ತಾನು ಮೆಚ್ಚಿದ್ದು ರಾಮಣ್ಣನನ್ನು, ರಾಮಣ್ಣ ಮೆಚ್ಚಿದ್ದು—ತನ್ನ ದೇಹವನ್ನೆ? ಹೆಂಡತಿ ಹಾಸಿಗೆ ಹಿಡಿದವಳೆಂದೊ, ಹೊಸ ಅನುಭವವೆಂದೊ, ಗಂಡುತನದ ಹೆಮ್ಮೆಯೆಂದೊ ರಾಮಣ್ಣ ತನ್ನನ್ನು ಕೂಡಿಕೊಂಡನಲ್ಲವೆ ? ಮದುವೆ ಇಲ್ಲದ ತಾಯ್ತನದಿಂದ ತನಗೆ ಸಮಾಜದಲ್ಲಿ ಪೀಡೆಯಾಗಬಹುದೆಂದು ಅನಿವಾರ್ಯವಾಗಿ, ಕನಿಕರದಿಂದ, ಉಪಕಾರ ಬುದ್ಧಿಯಿಂದ ತನ್ನನ್ನು ಮದುವೆಯಾಗಿದ್ದ ರಾಮಣ್ಣ ಎಂದು ನಂಬಿದ್ದಳು ತಾನು.

ಇವನ ಪ್ರೇಮ ಬೇಕು, ಉಪಕಾರ ಬೇಡ ; ಸಮಾಜವು ತನ್ನನ್ನು ಹೊರಗಿಟ್ಟರೂ ಇಡಲಿ, ಪ್ರೇಮಕ್ಕಾಗಿ ಸುಖದ ತ್ಯಾಗವನ್ನು ಮಾಡಲು ತಾನು ಸಿದ್ಧಳಾಗಿರುವಾಗ ಪ್ರೇಮವಿಲ್ಲದ ಮದುವೆಯ ಬಂಧನದಲ್ಲಿ ತನ್ನನ್ನು ಸಿಕ್ಕಿಸಿಕೊಂಡನಲ್ಲ ?

ಅಂದಿಗೇ ತನ್ನ ಪ್ರೇಮದ ಕತೆ ಮುಗಿದಿತ್ತು ಎಂದುಕೊಂಡಿದ್ದಳು ಕುಮುದ. ಮದುವೆಯಾದ ಒಂದು ತಿಂಗಳಲ್ಲಿ "ಸೋದರತ್ತೆ"ಯ ನೆಪದಿಂದ ಊರನ್ನು ಬಿಟ್ಟಿದ್ದಳು. ಮದುವೆಯಾಗಿದೆ, ಸಮಾಜದ ಹೆದರಿಕೆ ಇಲ್ಲ ಎಂಬ ಸಮಾಧಾನ ತನಗಿರಲಿಲ್ಲ ; ಪ್ರೇಮವಿಲ್ಲದ ಮದುವೆಯ ಹಾದರದ ಬಸಿರು ತನ್ನದು ಎಂದು ಒಳಗೆ ರೂಪುಗೊಳ್ಳುವ ಜೀವನವನ್ನು ದ್ವೇಷಿಸತೊಡಗಿದ್ದಳು. ಸೋದರತ್ತೆ ಅಲ್ಲದಿದ್ದರೂ ದೂರದ ಸಂಬಂಧದ ಒಂದು ಮುದಿಜೀವವಿದ್ದಿತು,

ಅಲ್ಲಿ ತಿಂಗಳೊಪ್ಪತ್ತು ಕಳೆಯೋಣ ಎಂದುಕೊಂಡಿದ್ದಳು. ಅದೂ ಅಸಹ್ಯ-ವಾಗಿತ್ತು.

"ಎಷ್ಟು ಸಲಕ್ಷಣ ಕಾಣ್ತೀಯೆ ? ಬಸಿರಿದ್ದೀಯೊ ಏನು ?" ಎಂದು ಮರುದಿನ ಬೆಳಗಿನಲ್ಲಿಯೆ ಆ ಮುದುಕಿ ಕೇಳಿತ್ತು.

"ಮದುವೆ ಆಯ್ತು ಅನ್ನೋದಾದ್ರೂ ತಿಳಿಸಬಾರ್ದೇನ? ಮದಿವೀಗೆ ಕರೀದಿದ್ರೂ ಅಷ್ಟೇ ಹೋಯಿತು! ಕಡಲೇಬ್ಯಾಳಿಯ ಹೋಳಿಗೆ, ಹಲ್ಲಿಲ್ಲದ ಮುದುಕೀಗೆ ನಡೆಯೋದಿಲ್ಲ ಅಂತ ತಿಳಿದೆಯೇನು ಮತ್ತೆ!"

ಒಂದೆರಡು ದಿನಗಳಲ್ಲಿಯೆ ಹೊರಟುಹೋಗೋಣ ಎನ್ನಿಸಿತ್ತು ಕುಮುದಳಿಗೆ.

ಆದರೂ —

ಕುಮುದಳಿಗೆ ಇಂದಿಗೆ ನಗೆ ಬರುವುದು ಅದನ್ನು ನೆನೆದರೆ. ಆ ಮುದಿಜೀವನದ ಸಹವಾಸದಲ್ಲಿ ಎಂತಹ ಸೊಗಸಿತ್ತು ಎಂಬುದನ್ನು ನೆನೆದರೆ ಆ ಕೆಲವು ದಿನಗಳು ತನ್ನ ಸುಖದ ದಿನಗಳು ಎಂದು ತಿಳಿಯು-ತ್ತಿದ್ದಳು.

"ತಡ ಮಾಡಿ ಮದಿವೆ ಆಗೋದು, ತಿಂಗಳೊಪ್ಪತ್ತಿನೊಳಗ ಬಸಿರು ಆಗೋದು! ಮುಗಿದೇ ಹೋಯ್ತು ಈಗಿನ ಹುಡುಗೇರ ಮದುವೇ ಸುಖ" ಒಂದು ದಿನ ಯಾವುದೊ ಸಂದರ್ಭದಲ್ಲಿ ನುಡಿದಿದ್ದಳಲ್ಲವೆ ಆ ಮುದುಕಿ ?

"ಮದಿವೆ ಅಂದ್ರೇನು ಅಂಬೋದು ಗೊತ್ತಾದ ಮ್ಯಾಲಾದರೂ ನಮ್ಮ ಮದಿವೆ ಆಗ್ತದ, ಅತ್ತೀ" ಎಂದು, ಯಾಕೊ ಏನೊ, ತಾನೂ ಕೆಣಕಿದ್ದಳು.

"ಏನು ಗೊತ್ತಾಗ್ತದ ನಿಮ್ಮ ತಲೆ! ಮದಿವೆ ಅಂದ್ರೆ ಅದೊಂದೇ ಅಲ್ಲ!"

"ಅದು ಅಂದ್ರೆ ಯಾವುದು, ಅತ್ತೀ ?"

"ಈಗ ಮಾಡಿಕೊಂಡು ಕೂತೀದಿಯಲ್ಲ, ಅದು" ಎಂದು ಹಟದಿಂದ ಹೇಳಿತ್ತು ಮುದುಕಿ.

"ಅದನ್ನ ಬಿಟ್ಟರ ಮತ್ತೇನದ ಮದಿವೀವಳಗ ?"

"ಹಾಂಗ ತಿಳಕೊಂಡೇ ಹಾಳಾಗ್ತೀವ, ಕುಮುದೀ, ಈಗಿನ

ಹುಡುಗೇರು ! ಅದನ್ನ ಬಿಟ್ರ ಏನದ ಅಂತ ? ಗಂಡಸೂ ಅದೇ ಮಾತ್ಹೇಳಿದ್ರ ನಿಂ ಗತಿ ಏನು ? ”

“ನನಗನಿಸ್ತದ, ಅತ್ತೀ, ಗಂಡಸಿಗೇ ಅದೊಂದು ಮುಖ್ಯ ಅನ್ನಿಸ್ತದ ಅಂತ. ಹೆಂಗಸಿಗೆ ಹುಟ್ಟಿದ ಮಕ್ಕಳನ್ನ ಬೆಳೆಸೋದಾದ್ರೂ ಇರ್ತದ.”

ಹಲ್ಲಿಲ್ಲದ ಬಾಯಿಯನ್ನು ತೆರೆದು ಮನಃಪೂರ್ತಿ ನಕ್ಕಿದ್ದಳು ಮುದುಕಿ ಆ ಮಾತಿಗೆ !

“ಗಂಡಸಿಗೇ ಅದು ಮುಖ್ಯ ಅಂತ ! ಅಯ್ಯ! ಹುಚ್ಚೀ! ಅದೇ ಮುಖ್ಯ ಆಗಿದ್ರ ಗಂಡಸು ಮದಿವೀನೇ ಮಾಡಿಕೋತಿದ್ದಿಲ್ಲ. ಮನೇ ಊಟದಕಿಂತ ಹೊಟೆಲ್‌ದ ತಿಂಡಿ ತಿನಿಸಿನ ರುಚಿ ಹೆಚ್ಚು ಗಂಡಸಿಗೆ. ನಿನ್ನ ಮದಿವಿ ಆಗಿ, ನಿನ್ನ ಮಕ್ಕಳ ಜಡ್ಡು-ಜಾಪತ್ರ ಸಹಿಸಿ, ನೀನು ಮುದುಕಿ ಆಗೋದನ್ನ ಕಾಣತಾ ಕಾಲಕಳೆಯೋ ಗಂಡಸಿಗೆ ಮದುವೆಯಲ್ಲಿ ಬೇಕಾದದ್ದು ಬ್ಯಾರೇನೆ ಇರ್ತದ, ಕುಮುದೀ !”

ಕುಮುದಳು ಅವಾಕ್ಕಾಗಿದ್ದಳು ಆ ಮಾತಿಗೆ. ಶಿಕ್ಷಣವಿಲ್ಲದ ಈ ಮುದಿ ಜೀವನದ ಬುದ್ಧಿವಂತಿಕೆಗೆ ಬೆರಗಾಗಿದ್ದಳು. ಅಷ್ಟರಲ್ಲಿ ಮುದುಕಿ ಸುಂಯ್ಗು ಡುತ್ತಿರುವುದನ್ನು ಕೇಳಿ ಇನ್ನಿಷ್ಟು ಚಕಿತಳಾಗಿದ್ದಳು.

“ಯಾಕೆ, ಅತ್ತೀ, ನನಗ ಬುದ್ಧಿ ಹೇಳ್ತಾ ನೀ ಅಳ್ತೀಯಲ್ಲ ?”

“ಅಳೋದಿಲ್ಲ, ತಂಗೀ. ಹಿಂದಿನ ಸುಖದ ದಿನ ನೆನಪಾಯ್ತು, ಸಂತೋಷ ತಡೀಧಾಂಗಾಯ್ತು”

ಈ ಮುದುಕಿ ಸುಖವನ್ನು ಕಂಡಿದ್ದಳೆಂಬುದೆ ಕುಮುದಳಿಗೆ ಹೊಸ ಸುದ್ದಿ. ಎಂದಿನಿಂದಲೂ ವಿಧವೆಯಾಗಿಯೆ ಇದ್ದ ಇವಳನ್ನು ನೋಡಿ ತನಗನ್ನಿಸಿತ್ತು —

ಕುಮುದಳಿಗೆ ಒಮ್ಮೆಲೆ ನಗೆ ಬಂದಿತ್ತು.

“ಯಾಕ ? ನಗ್ತೀ ಯಾಕ, ಕುಮುದೀ ?”

“ಏನಿಲ್ಲ ಅತ್ತೀ. ನೀ ‘ಸುಖದ ದಿನ’ ಅಂದದ್ದಕ್ಕ ಏನೊ ವಿಚಾರ ಬಂತು — ”

“ಅಂದ್ರೇನ ? ನಾನು ಮದುವೆ ಆಗಿಲ್ಲ, ಸುಖ ಕಂಡಿಲ್ಲ ಅಂತ ತಿಳಿದೀಯೇನು ?” ಮದುಕಿಗೆ ಹೊಳೆಯಿತೇನೊ, ನಗುತ್ತಲೆ ನುಡಿದಿದ್ದಳು,

"ನಾನು ಹುಟ್ಟ್ಯಾ ಹೀಂಗೇ ಇದ್ದೀನಿ ಅಂತ ತಿಳಿದಿದ್ದೆಯೊ ಏನು ?"

"ನನಗನ್ನಿಸ್ತು ಸುಖದ ದಿನ ನೆನಪಾಗಿ ಕೆಟ್ಟ್ಯ ಅನ್ನಿಸ್ತೇನೊ ಅಂತ"

"ಕೆಟ್ಟ್ಯ ಅನ್ನಿಸೋದು ? ಅಲ್ಲ, ಹುಚ್ಚೀ, ಸುಖದ ದಿನ ನೆನವಾದ್ರ ಸಂತೋಷ ಆಗೋದು. ಇಲ್ದಿದ್ರೆ ಇಷ್ಟು ದಿವಸ ಯಾಕೆ ಸಾಯ್ತಿದ್ದೆ ಜೀವಾ ಹಿಡಿದುಕೊಂಡು ? ಎಲ್ಯಾದರೂ ಕೆರೀಭಾವೀ ತಳದೊಳಗ ಸುಖದಿಂದ ಇರ್ತಿದ್ದೆ. ಆದ್ರೆ ಹಿಂದಿನ ಸುಖದ ಒಂದು ನೆನಪಿನಿಂದಲೇ ಇಂದಿಗೂ ನಾನು ಸುಖದಿಂದಿದ್ದೀನಿ ಅನ್ನು."

"ಅಂಥಾ ಸುಖ ಯಾವುದು, ಅತ್ತೀ ?"

"ನೀನು ಇನ್ನೂ ಸಣ್ಣಾಕೆ, ನಿನಗೆ ತಿಳಿಯೋದಿಲ್ಲ"

"ಅಯ್ಯ ! ಈ ಆಟಾ ಹೂಡಬ್ಯಾಡ, ಅತ್ತೀ. ಇಂದಿನ ಹುಡುಗೇರು ಬಹಳ ಲಗೂನೆ ದೊಡ್ಡವರಾಗ್ತಾರ."

"ಯಾತಕ್ಕ ದೊಡ್ಡವರಾಗ್ತಾರೊ ! ಆ ಕೆಲಸಕ್ಕ ದನ ಸಹಿತ ಲಗೂ ದೊಡ್ಡೂ ಆಗ್ತಾವ !"

"ನಿನಗ ಎರಡನೇ ವಿಚಾರಾನೇ ಇಲ್ಲ, ಅತ್ತೀ." ನೊಂದ ದನಿಯಲ್ಲಿ ಹೇಳಿದ್ದಳು.

"ನಿನ್ನ ಮಾತು ಹೇಳಲಿಲ್ಲ, ಕುಮುದಾ. ಒಟ್ಟು ಈಗಿನ ಹುಡುಗೇರ ಮಾತು ಹೇಳ್ತಿದ್ದೆ. ನಂ ಕಾಲದೊಳಗ 8–10 ವರ್ಷದವರಿದ್ದಾಗ ಮದಿವೆ ಆಗ್ತಿತ್ತು. ಗೌರಿ–ಗಂಗಿ, ಪಂಚಮೀ – ಚತುರ್ಥಿ, ಬೀರಿಸೋದು – ಏರಿಸೋದು ಅಂತ ಹುಡುಗತನದಾಗ ಒಂದೆರಡು ವರ್ಷ ಸಂತೋಷದಿಂದ ಇರ್ತಿದ್ವಿ....ಆ ನೆವದಿಂದ ಬೆಳೆದ ಹೆಣ್ಮಕ್ಕಳೊಳಗ ಓಡಾಡ್ತಿದ್ವಿ, ಅವರ ಮಾತು–ಕತೆಗಳಿಂದ ಬುದ್ಧಿ ಕಲೀತಿದ್ವಿ—"

"ಅದಿರ್ಲಿ, ಅತ್ತೀ, ನಿನ್ನ ಆ ಒಂದು ಸುಖದ ನೆನಪು ಯಾವುದು ಹೇಳು."

"ಅದನ್ನೆ ಹೇಳ್ತೀನೆ. ಇದನ್ನೆಲ್ಲಾ ಹೇಳದಿದ್ರ ಅದು ತಿಳಿಯೋದಿಲ್ಲ. ಅಷ್ಟೆಲ್ಲ ಮಾಡಿ ಪ್ರಬುದ್ಧ ಆಗೋದರೊಳಗ ನಮಗೆಲ್ಲಾ ಗೊತ್ತಿರ್ತಿತ್ತು, ಗಂಡಸರು ಹ್ಯಾಂಗ, ಅವರ ಸ್ವಭಾವ ಏನು, ನಮ್ಮವರು ಎಂಥವರು, ಅವರು ಯಾರ್ಯಾರ ಕೂಡ ಇರ್ತಾರ — ಅದು – ಇದು – ಎಲ್ಲ. ಅದಕ್ಕೇ ನನಗ

ನಮ್ಮವರ ನಡತೀ ಬಗ್ಗೆ ಸಿಟ್ಟೊ ಬರಲಿಲ್ಲ, ಆಶ್ಚರ್ಯಾನೂ ಅನ್ನಿಸಿ-ರಲಿಲ್ಲ."

"ಯಾಕೆ ನಿಮ್ಮವರ ನಡತೆ ಸರಿ ಇರಲಿಲ್ಲೇನು, ಅತ್ತೀ ?"

"ಸರಿಯೋ ಬೆಸಾನೊ ? ನಾಲ್ಕು ಜನ ಸರೀಕರು ಇದ್ದಾಂಗಿದ್ದರು."

"ಅಂದ್ರ – ಅಂದ್ರ – ಹೊರಗ ಏನಾದ್ರೂ — "

"ಹೊರಗ ಇದ್ದಳು ಒಬ್ಬಾಕೆ ಹೊಯ್ಮಾಲಿ !"

"ಆದ್ರೂ ನಿಮ್ಮವರ ಮ್ಯಾಲೆ ನಿನ್ನ ಸಿಟ್ಟು ಇದ್ದಿರಲಿಲ್ಲ ಅಂತೀಯಲ್ಲ, ಅತ್ತೀ ?"

"ಅಂದ್ರ ? ಕೂಸು ಹೊಲಸಿನಾಗ ಕಯ್ಯಾಡಿಸಿದರ ಕೂಸಿನ ಮ್ಯಾಲೆ ಸಿಟ್ಟಾಗ್ತೀಯಾ ? ಹೊಲಸು ಅಂತ ತಿಳಿಯೋದಿಲ್ಲ ಅದಕ್ಕ. ಅದೇನೊ ಒಂದು ಹೊಸದು, ಒಂದು ಮೋಜು."

"ಅದೆಂಥಾ ಮೋಜು, ಅತ್ತೀ ? ಮನೀಯವರು ಇಲ್ಲಿ ಇವರ ಸಲುವಾಗಿ ಗೋಳಾಡಿದರೆ ?"

"ಗೋಳಾಡ್ಲಿಕ್ಕೆ ನನಗೇನು ಧಾಡಿ ಆಗಿತ್ತು ? ನನ್ನ ಕೂಡ ಜಗಳಾ-ಡಿದ್ದರೆ ? ನನ್ನ ಹೊಡೀ ಬಡೀತಿದ್ದರೆ ?"

"ಆದ್ರೆ ನಿನ್ನ ಬಿಟ್ಟು ಇನ್ನೊಬ್ಬಾಕೇ —"

"ಅಯ್ಯ ! ಹುಚ್ಚೀ ! ನನ್ನಿಟ್ಟು ಅಂತ ! ನನ್ಯಾಕ ಬಿಡ್ತಾರ ?"

"ಅಲ್ಲ, ಅತ್ತೀ, ಬಿಡೋದು ಅಂದ್ರ – ಹೀಂಗ – ಅಲ್ಲ – ಅಂದ್ರ – ನೀ ಮನೀವಳಗಿದ್ದಾಗ ದಿನಾಲು ಅವರು—"

"ದಿನಾಲು ಅಂತ ! ಅದಕ್ಕೇ ಹೇಳ್ದೆ ಈಗಿನ ಹುಡುಗೇರಿಗೆ ಮದಿವೀ ಅಂದ್ರ ಅದೊಂದೇ ಅಂತ. ನನ್ನ ಜೋಡಿ ಸಂಸಾರ ಮಾಡಿದರ ಆಯ್ತಲ್ಲ ? ದಿನಾಲು ಏನು ಮಾಡ್ತಾರ, ಉಳಿದ ವ್ಯಾಳ್ಯಕ್ಕ ಏನ್ಮಾಡ್ತಾರ ನನಗೇ-ನ್ಮಾಡೋದು ? ನನಗೂ ಕೈ ತುಂಬ ಕೆಲಸ ಇರ್ತಿತ್ತು, ಮನೀ ತುಂಬ ಮಂದಿ ....ಅತ್ತೆ, ಮಾವ, ಮೈದುನ, ನಾದಿನಿ, ಬರೋವ್ರು, ಹೋಗೋವ್ರು— ಇದನ್ನೆಲ್ಲಾ ಬಿಟ್ಟು ದಿನಾ ಚಕ್ಕಂದ ಆಡ್ಲಿಕ್ಕೆ ನಾಯೇನು ಹುಚ್ಚಿಯೆ ?"

"ಇದೇ ನಿನ್ನ ಸುಖದ ದಿನದ ನೆನಪು ಅನ್ನು."

"ಇದು ದಿನದ ಮಾತಾಯ್ತು. ಸುಖದ ದಿನ ಅನ್ನೋದು ಬ್ಯಾರೇನೇ ಅದ."

"ಇಂಥಾದ್ದರೊಳಗ ಅದೆಂಥಾ ಸುಖದ ದಿನಾನೊ !"

"ಎಂಥಾದ್ದಂತೀಯಲ್ಲ ? ಕೇಳಿದಿ ಅಂದ್ರ ತಿಳಿದೀತು."

"ಹೇಳೋಹಾಂಗಿದ್ರ ಹೇಳು, ಅತ್ತೆ."

"ಹುಂ....ಇಲ್ಲಿ ತನಕ ಕೆದರಿ ಕೆದರಿ ನನ್ನ ಮಾತಾಡ್ಸಿ, ಇನ್ನು ಮುಂದ ಹೇಳೋಹಾಂಗಿದ್ರ ಹೇಳು ಅಂತಾಳ ನೋಡು ಚದುರಿ! ಬಾಯಿಗೆ ನೀರು ಬಿಟ್ಟ ಮ್ಯಾಲೆ ತುತ್ತು ತಿನ್ನದೆ ಬಿಡ್ತಾರ? ಹೇಳ್ತೀನಿ ಕೇಳು. ಒಂದಿನ ಎಲ್ಲಾ ಕೆಲಸ ಮುಗಿಸಿ ರಾತ್ರಿ ನಂ ಕೋಣೇವಳ್ಗ ಹೋಗಿ ಮಲಗೋ ತಯ್ಯಾರಿ ನಡಿಸಿದ್ದೆ."

"ಒಬ್ಬಾಕೀನೇ ?"

"ಅಂದ್ರ ? ನಾಯೇನು ಹೆದರಬುರುಕಿ ಇದ್ದೆ ಅಂತೀಯೇನು ?"

"ಅಲ್ಲ, ಅಂದ್ರ ನಿಮ್ಮವರು — ?"

"ನಮ್ಮವರು ಊಟ ಆದ ಕೂಡಲೆ ಹೊರಗ ಹೋಗಿದ್ದರು. ಊಟಾನೂ ಸರಿಯಾಗಿ ಮಾಡಿದ್ದಿಲ್ಲ. ಏನ ವಿಚಾರ ಅದನೊ ಏನೊ ಅಂತ ನಾನೂ ಸುಮ್ಮನಿದ್ದೆ, ರಾತ್ರಿ-ಬಂದ ಮ್ಯಾಲೆ ಕೇಳೋಣ ಅಂದ್ಕೊಂಡೆ."

"ರಾತ್ರಿ ಬರೋ ಭರವಸೆ ಇತ್ತು ಅನ್ನು."

"ಯಾವದರೊಳಗಾದ್ರೂ ಭರವಸೆ ಇಲ್ದೆ ಸಂಸಾರದೊಳಗ ಸುಖಾನೇ ಇಲ್ಲ, ಹುಡುಗೀ. ಹಿಂದಿನ 3-4 ದಿನ ಅವರು ಮನೀಗೆ ಬಂದಿರಲೇ ಇಲ್ಲ. ಏನೊ ಗೆಳೆಯರ ಜೋಡಿ ಇಸ್ಪೇಟು ಆಡತಿರಬೇಕು ಅಂತ ತಿಳಿದಿದ್ದೆ."

"ಸುಖ ಹೆಚ್ಚಿಕೊಳ್ಳೋ ಹಟಾನೇ ಇತ್ತು ಅನ್ನು ನಿನಗ ?"

"ಏನಂದಿ ?"

ತನ್ನ ಮಾತಿನ ರೀತಿ ಮುದುಕಿಗೆ ತಿಳಿದಿರಲಿಲ್ಲವೇನೊ! ತುಸು ಕಕ್ಕಾವಿಕ್ಕಿಯಾಗಿದ್ದಳು ತನ್ನ ಪ್ರಶ್ನಕ್ಕೆ.

"ನಾನು ಎಲ್ಲೀತನಕ ಬಂದಿದ್ದೆ ?"

"3-4 ದಿನ ನಿಮ್ಮವರು ಮನೀಗೆ ಬಂದಿರಲಿಲ್ಲ, ಆವೊತ್ತು ನೀನು ಮಲಗೋ ತಯ್ಯಾರಿಯೊಳಗ ಇದ್ದಿ-"

"ಹಂ... ಅಷ್ಟರೊಳಗ ತಲೆಬಾಗಿಲ ಸದ್ದಾಯ್ತು. ನನಗ ಆಶ್ಚರ್ಯ. ಬಂದ್ರೂ ಇಷ್ಟು ಬ್ಯಾಗ ಬರೋನ್ರಲ್ಲ. ಊಟಾನೂ ಸರಿಯಾಗಿ ಮಾಡಿಲ್ಲ. ಯಾಕ ಸಿಟ್ಟು ಬಂದಿದಯೊ ಏನೊ-ಅಂತ....ಅಷ್ಟರೊಳಗ ಕೋಣೇ ಒಳಗ ಬಂದ್ರು, ಅಂಗೀ ತಗದಿಟ್ಟು, ಉಶ್ ಅಂತ ಬಂದು 'ಚಿಕ್ಕೀ' ಅಂದರು—"

"ಏನಂದ್ರು ?"

"ಚಿಕ್ಕೀ ಅಂದ್ರು. ನಾನು ಮದುವೇ ಒಳಗ ಬಹಳ ಚಿಕ್ಕಾಕಿ ಕಾಣಿಸ್ತಿದ್ದೆ ಅಂತ ನನಗ ಚಿಕ್ಕೀ ಅಂತಿದ್ರು. ಮುಂದ ಸಂಸಾರ ಪ್ರಾರಂಭ ಆಗೋವಾಗ ಒಮ್ಮೆ ನನ್ನ ನೋಡಿ 'ಎಲೆ! ನೀನು ಆಕಾಶದೊಳಗಿನ ಚಿಕ್ಕೆ ನೋಡು. ಮದುವೇ ಒಳಗ ದೂರದಿಂದ ನೋಡಿದ್ರೆ, ಇಷ್ಟೇ ಕಾಣ್ತಿದ್ದಿ, ಈಗ ಹತ್ತಿರದಿಂದ ನೋಡಿದರ' – ಅಂತಾ – ಅಲ್ಲ – ಅಂತೂ ನನಗ 'ಚಿಕ್ಕೀ' ಅಂತ ಕರೀತಿದ್ರು. 'ಚಿಕ್ಕೀ' ಅಂದ್ರು. 'ಯಾಕ ಈವೊತ್ತು ಸರಿಯಾಗಿ ಊಟಾನೇ ಮಾಡಲಿಲ್ಲ ?' ಅಂತ ಕೇಳಿದೆ. 'ಯಾಕೊ, ತಲಿ ನೋವು, ಚಿಕ್ಕೀ' ಅಂದ್ರು. 'ಅಮೃತಾಂಜನ ತರಲೇನು ?' ಅಂತ ಕೇಳಿದೆ. 'ಅಮೃತಾಂಜನ ಬರಲಿ' ಅಂದರು — "

"ಏನಂದ್ರು ?"

"ಅಮೃತಾಂಜನ ಬರಲಿ ಅಂದ್ರು. ಅದು ಅವರ ಮಾತಿನ ರೀತಿ. 'ಯಾವ ಔಷಧಾನೂ ಬ್ಯಾಡ, ಚಿಕ್ಕೀ. ಇಲ್ಲಿ ಬಾ ನೀನು' ಅಂತ ನನ್ನ ಕೂಡಿಸಿಕೊಂಡು ನನ್ನ ತೊಡೆಯ ಮ್ಯಾಲೆ ತಲೆ ಇಟ್ಟು ಮಲಗಿದರು. ನಾ ಕೆಳಗೆ ನೋಡೋದ್ರೊಳಗ ನಿದ್ದೆ ಹತ್ತಿತ್ತs, ಕುಮುದೀ! ಗಂಡನು ಅಂದ್ರ ಆಟ ಆಡೋ ಹುಡುಗ ಅಂತ ಆವೊತ್ತು ನನಗ ಗೊತ್ತಾಯ್ತು. ಹೊರಗ ಯಾವ ಆಟಾನೇ ಆಡಲಿ, ಎಷ್ಟೊತ್ತೇ ಆಡಲಿ, ವಿಶ್ರಾಂತಿ, ಸಮಾಧಾನ, ಆಧಾರ ಅಂದ್ರ ಮನೀವಳ್ಗಿನ ಹೆಂಡ್ತೀನೇ ನೋಡು. ಈವತ್ತಿಗೂ – ಈಗ ನನಗ ಬಾಯಿಗೆ ಹಲ್ಲಿಲ್ಲ, ಕಣ್ಣಿಗೆ ದೃಷ್ಟಿ ಇಲ್ಲ, ತೊಡೆ ಅಂದ್ರ ಒಣಗಿದ ಬೆಂಡ ಆಗ್ಯಾವ – ಆದ್ರೂ ಈವತ್ತಿಗೂ ಆ ನೆನಪು ನನಗ ಬಂತು ಅಂದ್ರ ಅಂದಿನ ಹರೇತಿರುಗಿ ಬಂಧಾಂಗಾಗ್ತದ ನೋಡು."

"ಸಾಕು, ಸಾಕು, ಅತ್ತೀ !"

"ಅಯ್ಯ! ಹುಚ್ಚೀ! ನಿನಗೇನಾಯ್ತು ಅಳಲಿಕ್ಕೆ ?"

"ನಾನು ಅಳೋದಿಲ್ಲ, ಅತ್ತೀ, ಅಳೋದಿಲ್ಲ" ಎಂದು ತಡೆಯದಂತಾಗಿ ಕೋಣೆಗೆ ಓಡಿಹೋಗಿದ್ದಳು. ಅಂದಿನ ರಾತ್ರಿಯಷ್ಟು ಗಾಢವಾದ ನಿದ್ದೆ ಇನ್ನೆಂದಿಗೂ ಬಂದಿರಲಿಲ್ಲ.

ಬೆಳಿಗ್ಗೆ ಎದ್ದಾಕ್ಷಣ ನೋಡಿದಳು, ರಾಮಣ್ಣ ಬಂದಿದ್ದಾನೆ.

ಕೈಯಲ್ಲಿ ಹಿಡಿದದ್ದು, ಅಂದು ಕೈಯಲ್ಲಿ ಹಿಡಿದದ್ದು, ಇದೇ ಸೀರೆಯನ್ನು.

ತತ್‌ಕ್ಷಣ ಮುನ್ನಾರಾತ್ರಿಯ ಸವಿನೆನಪು ಕನಸಿನಂತಾಯಿತು.

"ಹಾಳು ! ಈ ಸೀರೆ ಅಂದ್ರ ಸುಖವನ್ನ ಮರೆಮಾಡೋ ಪರದೆ !"

ಆದರೂ ಯಾವುದೊ ಕಾರಣಕ್ಕಾಗಿ ಇಂದು ತಾನು ಅದನ್ನೆ ಉಟ್ಟಿದ್ದಾಳಲ್ಲ ? ಹಿಂದೆ ಒಂದೇ ನಲ ಅದನ್ನುಟ್ಟಾಗ ಮೋಹನನಿಗೆ ಜ್ವರ ಬಂದಿತ್ತು.

ಛಿ ! ಎಂತಹ ಕೆಟ್ಟ ವಿಚಾರ ! ಮೋಹನ ಬರಬಹುದು ಇಷ್ಟರಲ್ಲಿಯೆ ಎಂದುಕೊಂಡು ನಿರಾಶೆಯಿಂದ ಹುದುಗಿಕೊಳ್ಳುವವಳಂತೆ ಅಲ್ಲಿಯೆ ಕುಳಿತುಕೊಂಡಳು ಎದುರು ಗೋಡೆಯನ್ನು ನೋಡುತ್ತ.

## ೬

ನಗೆಮೊಗದಿಂದಲೆ ರಾಮಣ್ಣ ಕಿಟಕಿಯ ವರೆಗೆ ಹೋಗಿ ಒಂದೆರಡು ನಿಮಿಷ ದೂರದವರೆಗೆ ನಿರಿಕಿಸಿ ನೋಡಿದ. ಕೈ ಗಡಿಯಾರವನ್ನು ನೋಡಿಕೊಂಡ. ಇನ್ನೂ ಏನಿಲ್ಲೆಂದರೂ 45 ನಿಮಿಷ ನಭೆಯಿಂದ ಕರೆಬರಲು. ಇಲ್ಲವಾದರೆ ಬಂದವರೆ ಕಾರಣವಿಲ್ಲದೆ ನಗುವ ತನ್ನನ್ನು ನೋಡಿ ಏನಾದರೂ ತಿಳಿದುಕೊಳ್ಳಬಹುದು. ಕಾರಣವಿಲ್ಲ ಎಂದಲ್ಲ, ಆ ಕಾರಣವನ್ನು ಅನ್ಯರಿಗೆ ಹೇಳುವಂತಿಲ್ಲ. ಇದೂ ಅಲ್ಲದೆ ಹತ್ತುವರ್ಷಗಳ ಹಿಂದಿನ ನಂಗತಿ. ಅಷ್ಟಕ್ಕೂ ಮೀರಿ ತನದೊಂದು ಅನುಭವದ, ಸ್ವಂತದ ಭಾವನೆಯ ವಿಷಯ.

ಹೋಗಲಿ ಬಿಡು ಎನ್ನುವಂತೆ ಉಸಿರೆಳೆದು ಕುರ್ಚಿಯತ್ತ ನಡೆದ; ಹೆಜ್ಜೆ ಬದಲಾಯಿಸಿ ಪುಸ್ತಕಗಳ ಕಪಾಟನ್ನು ನೋಡಿ, ಆ ಕಡೆ ಹೋಗಿ, ಕಪಾಟನ್ನು ತೆರೆದು ಪುಸ್ತಕಗಳನ್ನು ನೋಡತೊಡಗಿದ; ಒಂದು ಪುಸ್ತಕವನ್ನೆತ್ತಿಕೊಂಡು ಪುಟ ತೆರೆದ. ಸಂಸ್ಕೃತ ಶ್ಲೋಕ ! ಪುಸ್ತಕದ ಹೆಸರನ್ನು

ನೋಡಿದ, ಕಾಳಿದಾಸ ಕವಿಯ ಅಭಿಜ್ಞಾನ ಶಾಕುಂತಲಂ ನಾಟಕ. ಶ್ಲೋಕವನ್ನು ಮತ್ತೊಮ್ಮೆ ಓದತೊಡಗಿದ.

' ರಮ್ಯಾಣಿ ವೀಕ್ಷ್ಯ ಮಧುರಾಂಶ್ಚ ನಿಶಮ್ಯ ಶಬ್ದಾನ್
ಪರ್ಯುತ್ಸುಕೀ ಭವತಿ ಯತ್ ಸುಖಿತೋಽಪಿ ಜಂತುಃ ।
ತಚ್ಚೇತಸಾ ಸ್ಮರತಿ ನೂನಮಬೋಧಪೂರ್ವಂ
ಭಾವಸ್ಥಿರಾಣಿ ಜನನಾಂತರಸೌಹೃದಾನಿ ॥
(ಪರ್ಯಾಕುಲಸ್ತಿಷ್ಠತಿ) '

ಹುಂ ಹುಂ ಎಂದು ಗುಂಯ್ಗುಟ್ಟ ರಾಮಣ್ಣ ತಾನೂ "ಪರ್ಯಾಕುಲ" ನಾಗಿಯೆ ನಿಂತು ಬಿಟ್ಟ.

ಅದಕ್ಕೇ ಈ ಪುಣ್ಯಾತ್ಮನನ್ನ ಶ್ರೇಷ್ಠಕವಿ ಎಂದು ಹೊಗಳ್ತಾರೆ ಜನ – ಎಂದು ಕಾಳಿದಾಸನಿಗೆ ಶಿಫಾರಸ ಪತ್ರವನ್ನು ಕೊಟ್ಟು ಶ್ಲೋಕವನ್ನು ಮತ್ತೊಮ್ಮೆ ಓದುತ್ತ ಕುರ್ಚಿಯಲ್ಲಿ ಬಂದು ಕುಳಿತುಕೊಂಡ. ಕಾಳಿದಾಸ ಶ್ರೇಷ್ಠ ಕವಿ.

ಇದರಲ್ಲಿ ಸಂದೇಹವೆ ಇಲ್ಲ. ಹೊರಗಿನ ಜಗತ್ತಿಗಿಂತ ಮನುಷ್ಯನ ಒಳಗೆ ಇದ್ದ ಜಗತ್ತನ್ನು ಪ್ರವೇಶಿಸಿ, ಸಂಚಾರ ಮಾಡಿ, ನಮಗೆಲ್ಲರಿಗೂ ಅನುಕೂಲವಾಗುವಂತೆ ಅಂತಃಕರಣಗಳ ನಕ್ಷೆಯನ್ನೆ ಬರೆದಿಟ್ಟಿದ್ದಾನೆ ಎನ್ನಬಹುದು.

ಇಂದು ತಾನು ಉಲ್ಲಾಸದಲ್ಲಿರಬೇಕಾಗಿತ್ತು. ಯಾವ ಸಾಹಿತಿಗೂ ಇಲ್ಲದ ಗೌರವ ತನಗೆ. ಸಾರ್ವಜನಿಕ ಸಭೆ, ಸಾರ್ವಜನಿಕ ಸತ್ಕಾರ! ಇನ್ನೇನು ಬೇಕಿತ್ತು? ಸಾರ್ವಜನಿಕ ಉಪಚಾರಕ್ಕಾಗಿಯೆ ಇರಲಿ, ಕುಮುದಳೂ ತನ್ನೊಡನೆ ಸಭೆಗೆ ಬರತಕ್ಕವಳಿದ್ದಾಳೆ. ಅವಳ ವೇಷ, ಭೂಷಣ, ಅಲಂಕಾರ — ಎಲ್ಲಕ್ಕೂ ಹೆಚ್ಚಾಗಿ ಅವಳ ಅಂಗಾಗಗಳಲ್ಲಿ ಸ್ಫುರಿಸುತ್ತಿರುವ ನಿಗ್ರಹ ಜೀವನ – ಇದನ್ನು ಕ್ಷಣಮಾತ್ರ ಕಣ್ಣಾರೆ ಕಂಡಾಗ ರಾಮಣ್ಣನಿಗೆ ಸ್ವರ್ಗ ಲಭಿಸಿದಂತಾಯ್ತು. ಸ್ವರ್ಗ ಯಾಕೆ? ಮೋಕ್ಷವೆ ಲಭಿಸಿತೆನ್ನಬಹುದು ಕುಮುದಳು ಉಟ್ಟ ಸೀರೆಯನ್ನು ನೋಡಿ.

ಆ ಸೀರೆ! ಅಂದು ತಾನು ಮನಃಪೂರ್ವಕವಾಗಿ ಪ್ರೇಮದ ಕಾಣಿಕೆ

ಎಂದು ತಂದುಕೊಟ್ಟ ಸೀರೆ! ಆ ಸೀರೆಯನ್ನುಟ್ಟ ಸೌಂದರ್ಯಮೂರ್ತಿ-ಯನ್ನು ನೋಡಿದಾಗ ಒಂದು ಕ್ಷಣ ಆನಂದವೆನಿಸಿತು. ಮುಂದಿನ ಕ್ಷಣವಲ್ಲಿ, ಮುಂದಿನ ಕ್ಷಣದಿಂದ ಮನಸ್ಸು ಉದ್ವಿಗ್ನವಾಯಿತು, "ಪರ್ಯಾಕುಲ" ವಾಯಿತು. ಯಾಕೆ ? ಹಿಂದಿನದು ಸ್ಮರಣೆಗೆ ಬಂದೊ ? ಮುಂದಾಗುವುದರ ಸೂಚಕವೆಂದೊ ?

ಕಾಳಿದಾಸ ಹೇಳುತ್ತಾನೆ, ಸುಂದರ ವಸ್ತುಗಳನ್ನು ನೋಡಿದಾಗ ಹಿಂದಿನ ಜನ್ಮದ ನೆನಪುಗಳು ನಮಗರಿಯದೆಯೆ ನಮ್ಮನ್ನು ಪರ್ಯಾಕುಲ ಮಾಡುವುವು ಎಂದು.

ಹಿಂದಿನ ಜನ್ಮದಷ್ಟು ದೂರ ಯಾಕೆ ? ಇಂದಿನ ಜನ್ಮದ ನೆನಪೇ ರಾಮಣ್ಣನನ್ನು ಗಾಸಿ ಮಾಡತೊಡಗಿದೆ. ಹತ್ತು ವರ್ಷಗಳ ಹಿಂದೆ, ಮದಾಂಧತೆಯ ಭರದಲ್ಲಿ, ಸುಳ್ಳಿನಿಂದ ಗೆಳೆಯನನ್ನು ವಂಚಿಸಿ ತಾನು ಆ ಸೀರೆಯನ್ನು ಕೊಂಡು ತರಿಸಿದ್ದ—ಕುಮುದಳಿಗಾಗಿ.

ಉತ್ಸಾಹದಿಂದ ಮನೆಗೆ ಹೋದರೆ ಕುಮುದಳಿ ಇದ್ದಿರಲಿಲ್ಲ !

ಒಂದು ಕ್ಷಣ ಗಾಬರಿಗೊಂಡಿದ್ದ ಆಗ ರಾಮಣ್ಣ. ಮರುಕ್ಷಣ ನಿರಾಶೆ ಯಿಂದ ನಿರ್ವಿಣ್ಣನಾಗಿದ್ದ ಮೂರನೆಯ ಗಳಿಗೆಗೆ ಗಟ್ಟಿಯಾಗಿ ನಕ್ಕುಬಿಟ್ಟಿದ್ದ.

ನಗೆಗೂ ಸಂತೋಷಕ್ಕೂ ಸಂಬಂಧವಿಲ್ಲ, ಅತ್ಯಂತ ಸಂತಪ್ತ ಹೃದಯ ದಿಂದಲೂ ನಗೆ ಸೂಚಿಸುವುದು ಎಂಬುದು ಅಂದಿನ ಅನುಭವದಿಂದ ಅವನಿಗೆ ತಿಳಿದುಬಂದಿತ್ತು. ಅಂದು ತಾನು ನಕ್ಕದ್ದು ಯಾಕೆ ? ನಾಟಕದಲ್ಲಿಯ ಪಾತ್ರನಾಗಿದ್ದರೆ ಯಾಕೆ ಎಂಬುದನ್ನು ದೀರ್ಘವಾದ ಸ್ವಗತದಿಂದ ಅನ್ಯರಿಗೆ ತಿಳುಹಿಸಬಹುದಾಗಿತ್ತು. "ಎಲವೊ ! ಮೂರ್ಖಾ ! ರಾಮಣ್ಣಾ, ಹೇಗಾ ಯಿತು ನಿನ್ನ ಫಜೀತಿ ! ಹೇಗೆ ಬಿತ್ತು ನಿನ್ನ ಕೆನ್ನೆಗೆ ಏಟು ! ಹಹ ! ಸೀರೆ ಯನ್ನು ತಂದಿರುವೆಯಲ್ಲವೆ ? ಹಹ ! ಕುಮುದಳಿಗಾಗಿ ಸೀರೆಯನ್ನು ತಂದಿರುವೆಯಲ್ಲವೆ ? ಹಹಹಹ ! ಎಲವೋ ಪ್ರೇಮವಂಚಕಾ, ನಿನಗಾಗಿ ಜೀವವನ್ನು ಕೊಟ್ಟ, ನೀನೇ ನನ್ನ ಜೀವ ಎಂದು ಹೇಳುತ್ತಿದ್ದ ನಿನ್ನ ಹೆಂಡತಿ ಸರಲೆ ಬದುಕಿದಾಗ ಒಂದು ಸಲವಾದರೂ ಆಕೆಗಾಗಿ ಇದರ ಅರ್ಧದಷ್ಟಾದರೂ ಒಳ್ಳೆಯ ಸೀರೆಯನ್ನು ತಂದಿದ್ದೆಯಾ ? ಹಃ ! ಈಗ ತಂದಿದ್ದಾನೆ !

ಯಾರಿಗಾಗಿ?...." ಆದರೆ ಈ ಭಾಷಣ ತನಗೂ ಕೇಳಿಸದಷ್ಟು ಸ್ವಗತಮಾಡಿ ತಾನು ಅಂದು ನಕ್ಕಿರಬೇಕು.

ಹತ್ತು ವರ್ಷಗಳ ತರುವಾಯ, ಇಂದು ವಿಚಾರಮಾಡಿ ನೋಡಿದರೆ? ವಿಚಾರವನ್ನು ಧೈರ್ಯದಿಂದ ಎದುರಿಸಿದರೆ ?

ರಾಮಣ್ಣ ತಟ್ಟನೆ ಹೆದರಿದ. ಒಳಗಿನ ಪ್ರಶ್ನೆಕ್ಕೆ ಸರಿಯಾಗಿ ತಾನು ಇದಿರು ನೋಡುತ್ತಿದ್ದುದು ಒಮ್ಮೆಲೆ ಲಕ್ಷ್ಯಕ್ಕೆ ಬಂದಿತು. ಇದಿರು ಗೋಡೆಗೆ ಸರಲೆಯ ಭಾವಪಟ !

ಮುಖ ತುಂಬ ನಗೆ ಇದೆ ಭಾವಪಟದಲ್ಲಿ, ತುಟಿಗಳಲ್ಲಿ, ಬಾಯಿಯಲ್ಲಿ, ಕಪೋಲಗಳಲ್ಲಿ, ಕಣ್ಣುಗಳಲ್ಲಿ — ನೋಡಿದಲ್ಲೆಲ್ಲ ನಗೆ ! ಬಣ್ಣದ ಬದಲು ನಗೆಯಲ್ಲಿಯೆ ಕುಂಚವನ್ನದ್ದಿ ಬರೆದಂತಿದೆ ಚಿತ್ರ. ಮೊದಲು ಬಡತನ, ಆಮೇಲೆ ಬಳಲಿಕೆ. ಸುಖವನ್ನು ಕಾಣದೆ ನಗುವ ಜೀವನ ಸರಲೆಯದು.

"ಏನ್ಮಾಡ್ತಾ ಇದ್ದೀರಿ ?" ಎಂದಿದ್ದಳು ಒಮ್ಮೆ.

"ಬರೀತಾ ಇದ್ದೀನಿ" ಎಂದು ತಾನು ಉತ್ತರಿಸಿದ್ದ.

"ನಾಕ್ಬಿಡ್ರಿ. ಯಾವಾಗ ನೋಡಿದ್ರೂ ಬರೆಯೋದೇ ಬರೆಯೋದು ! ಏನ್ಸುಖಾ ಅದನೊ ಅದರೊಳಗ ?"

"ಸರಲಾ, ನಿನಗೆ ಸುಖ ತಂದ್ಕೊಡ್ಬೇಕು ಅನ್ನೋ ಅವಸರ ನನಗ. ಅದಕ್ಕ ಹೀಗೆ ಒಂದೇ ಸವನೆ ಬರೀತಾ ಇದ್ದೀನಿ."

"ನನಗ? ಇನ್ನೂ ಎಷ್ಟು ಸುಖಾ ತಂದ್ಕೊಡ್ಬೇಕಂತೀರಿ ? ಹೊಟ್ಟೀ ವಳಗ ಹಿಡಿಸಬೇಕೊ, ಹೆಚ್ಚಾಗಬೇಕೊ ?"

"ಹೆಚ್ಚಾಗಿ ಹೊರಸೂಸಬೇಕು, ಅಂದ್ರೇನೇ ನಿನಗೆ ಶೋಭಿಸ್ತದೆ" ಎನ್ನುತ್ತ ತಾನು – ಕಣ್ಣೀರಿನ ಜೊತೆಗೆ ಸ್ಮರಿಸಿಕೊಂಡ — ಅವಳ ತುಟಿಗೆ ಬೆರಳಿನಿಂದ ಮಿದುವಾಗಿ ಏಟನ್ನು ಕೊಟ್ಟಿದ್ದ. ಅದೇ ತಾಂಬೂಲವನ್ನು ಸವಿದುದಕ್ಕೆ ಕೆಂಪುರಸ ತುಟಿಗಳಿಂದ ಹೊರಚಿಮ್ಮುವಂತಿತ್ತು - "ಹೀಗ ಹೊರಸೂಸ್ಬೇಕು " ಎಂದಿದ್ದ.

"ಮಾತಾಡೋ ಹಾಗೇನೇ ಬರೀಬಾರ್ದು ? ಅಂದ್ರ ನಿಂ ಪುಸ್ತಕಗಳ ಮಾರಾಟಾದ್ರೂ ಆದೀತು."

"ಮಾತಾಡೋದನ್ನ ಕೇಳುವವಳು ಮನೆಯ ಹೆಂಡತಿ, ಬರೆದಿದ್ದನ್ನ ಓದುವವರು ಮಂದಿಯ ಹೆಂಡಂದಿರು." ಎಂದು ತಾನು ನಗೆಯಾಡಿದ್ದ.

"ಅವರು ಓದೋದಕೆ ಒಂದಿವಸ ತಡ ಆದೀತು, ಈವೊತ್ತು ಬರೀ ಬ್ಯಾಡಿರಿ."

"ಯಾಕೆ ? ಈವೊತ್ತೇನಿದೆ ?"

"ಯಾವೊತ್ತು ಏನಿರೋದು ? ನಿಮ್ಮ ಕೈ ಹಿಡಿದಂದಿನಿಂದ — "

"ಹಾಂ. ತಡೆ, ತಡೆ ! ಥೂ ! ಮತ್ತೆ ಮರೆತೆ ನಾನು ! ಈಸಲಾನೂ ಮರೆತೆ ! ಸರಲಾ, ಕ್ಷಮಿಸು ನನ್ನನ್ನು. ನನ್ನ ಬರೆಯೋದು ಅನ್ನುವಂಥಾ ಒಂದು ಕ್ಷುಲ್ಲಕ ಸ್ವಾರ್ಥಮದದಲ್ಲಿ ಇಂದು ನಮ್ಮ ಮದುವೆಯ ವಾರ್ಷಿಕೋತ್ಸವ ಅನ್ನೋದನ್ನ—"

ಸರಲೆ ತನ್ನ ಬಾಯಿಗೆ ಕೈಯನ್ನಿಟ್ಟು ತಡೆದಿದ್ದಳು. "ಅಂಥಾ ಮಾತ ನ್ನಾಡಬ್ಯಾಡಿರಿ. ವರ್ಷದೊಳಗೆ ಒಂದೇ ದಿನದ ಉತ್ಸವ ಅಲ್ಲ ನಮ್ಮ ಮದುವೆ. ನನಗಂತೂ ಪ್ರತಿಯೊಂದು ದಿನ ಉತ್ಸವದ ದಿನ ಅನಿಸ್ತದ."

"ಸರಲಾ, ನಿನ್ನಂಥವಳ ಕೈ ಹಿಡಿಯೋ ಯೋಗ್ಯತಾ ನನ್ನಲ್ಲಿಲ್ಲ. ಜನ್ಮ ಜನ್ಮಾಂತರಗಳು ಬೇಕು ಅದನ್ನ ಪಡೆದುಕೊಳ್ಳಲಿಕ್ಕೆ."

"ಅವೆಲ್ಲಾ ಜನ್ಮಗಳೊಳಗೂ ನಾನು ನಿಮ್ಮ ಬೆನ್ನು ಬಿಡುವಾಕಯಲ್ಲ" ಎಂದು ಅವಳೂ ನಗೆಯಾಡಿದ್ದಳು.

"ಹಿಂದಿನ ಜನ್ಮದೊಳಗ ನೀನು ಒಂದು ಕಡ್ಡಿಯನ್ನು ಕೂಡಾ ಕೈಯಿಂದೆತ್ತಿ ಇನ್ನೊಬ್ಬರಿಗೆ ಕೊಟ್ಟಿರಲಿಕ್ಕಿಲ್ಲ ನೋಡು, ಸರಲಾ."

"ಯಾಕ ? ಆ ವಿಚಾರ ಯಾಕ ಬಂತು ನಿಮಗ ?"

"ಅಲ್ಲ, ನನ್ನಂಥಾ ದರಿದ್ರ ಗಂಡ ಗಂಟುಬಿದ್ದನಲ್ಲ ನಿನಗ ? ಒಂದು ದಿವಸ ಒಂದು ಒಳ್ಳೇ ಸೀರೆ ತಂದುಕೊಡೋ ತಾಕತ್ತಿಲ್ಲ, ನಿನ್ನ ಸೌಂದರ್ಯಕ್ಕೆ ಶೋಭಿಸೋವಂತಹಾದು !"

"ಹೆಂಡತೀ ಸೌಂದರ್ಯ ಶೋಭಿಸೋದು ಆಕೆ ಉಟ್ಟ ಸೀರೆಯಿಂದಲ್ಲ, ಆಕೇ ಕೈಹಿಡಿದವರು ಕೊಟ್ಟ ಪ್ರೇಮದಿಂದ."

"ಅಂತೂ ಸೌಂದರ್ಯಕ್ಕೂ concession rate ಇದೆ ಅನ್ನು."

ಆ ಮಾತಿಗೂ ಸರಲೆ ನಕ್ಕಿದ್ದಳು. ಯಾವ ಮಾತಿಗೂ ನಗೆ. ಇರುವಾಗ ನಗೆ, ಈಗ – ಈಗಲೂ ಭಾವಪಟದಲ್ಲಿ ನಗೆ !

ರಾಮಣ್ಣ ಉಸುರ್ಗರೆದ. "ಪರ್ಯಾಕುಲ". ಕಾಳಿದಾಸ ಸರ್ವಾಂತರ್ಯಾಮಿಯಾಗಿದ್ದನೊ ಏನೊ ? ಸುಖದ ಸ್ಮರಣೆಯಿಂದ ದುಃಖ ಆಗೋದು ಅಂತ ಎಷ್ಟು ಸರಿಯಾಗಿ ಹೇಳಿದ್ದಾನೆ !

ಹುಂ....ಇನ್ನೊಂದು ಮಾತನ್ನು ಮಾತ್ರ ಕಾಳಿದಾಸ ಹೇಳಲಿಲ್ಲ. ಅದನ್ನ ತಾನು ಅನುಭವದಿಂದ ಕಾಣತಾ ಇದ್ದಾನೆ. ಅದೆಂದರೆ, ದುಃಖದ ಸ್ಮರಣೆಯಿಂದ ಸುಖ ಆಗೋದು ! ಇಲ್ದಿದ್ರೆ ಹಿಂದಿನದನ್ನೆಲ್ಲಾ ತಾನು ಯಾಕೆ ಸ್ಮರಿಸತಾ ಕೂತುಕೊಳ್ಳಬೇಕಾಗಿತ್ತು ?

ಮತ್ತೊಮ್ಮೆ ಕೈಗಡಿಯಾರವನ್ನು ನೋಡಿಕೊಂಡ. ಹುಂ. ವಿಚಾರದ ವೇಗಕ್ಕೂ ಗಡಿಯಾರದ ವೇಗಕ್ಕೂ ಎಷ್ಟು ಅಂತರ ಇದೆ. ಇನ್ನೂ 42 ನಿಮಿಷ ತನ್ನ ಸತ್ಕಾರದ ಸ್ವಾಗತ ಸಮಿತಿ – ಬರುವ ನಿರೀಕ್ಷೆಗೆ ! ಈಗ ತಾನು ಒಂದಿಷ್ಟು ಗಂಭೀರನಾಗಿ ಕುಳಿತುಕೊಳ್ಳಲು ಯತ್ನಿಸಬೇಕು. ..ಮತ್ತೆ ನಗೆ ಬಂದಿತು. ಛೆ ! ಆ ಸೀರೆಯ ನೆನಪನ್ನು ನಮಿದೇ ಬಿಡೋಣ, ತಡೆದಿಟ್ಟರೆ ಸತ್ಕಾರ ಸಮಿತಿಯವರು ಬಂದಾಗ ನೆನಪಿಗೆ ಬಂದು ಅನಾಹುತವಾದೀತು.

ಥೂ ! ಇದೇನು ಹುಡುಗಾಟದ ವಿಚಾರ ಎಂದು ಮತ್ತೆ ಕುರ್ಚಿಯಿಂದ ಎದ್ದ. ಯಾಕೆ ಈ ಹಾಳು ನೆನಪುಗಳು ? ಬೆನ್ನಿಗೆ ಕೈಕಟ್ಟಿಕೊಂಡು ಕೋಣೆಯ ಉದ್ದ ಹೆಜ್ಜೆಗಳನ್ನಿಟ್ಟು ನಡೆದ. ಮೊದಲನೆಯ ಹೆಂಡತಿ ತೀರಿಕೊಂಡಳು ; ಆಕೆ ಸಾಯೋ ಮುಂಚಿತ ಯಾವುದೊ ಕಾರಣಕ್ಕಾಗಿ ಮನೀವಳಗ ಇದ್ದ ಇನ್ನೊಬ್ಬಾಕೆಯನ್ನ ಮೋಹಿಸಿದೆ ; ಹಾಸಿಗೆ ಹಿಡಿದ ಹೆಂಡತಿಗೆ ತಿಳಿಯದ ಹಾಗೆ ಆ ಇನ್ನೊಬ್ಬಾಕೆಯ ಕೂಡ ವ್ಯಭಿಚಾರದಿಂದ ವರ್ತಿಸಿದೆ, ಆ ಹುಡುಗಿಗೆ ಬಸಿರು ನಿಂತಿತು, ಹೆಂಡತಿ – ತೀರಿಕೊಂಡಳು, ಆ ಹುಡುಗೆಯನ್ನು ಮದುವೆಯಾದೆ. ಜಗತ್ತಿನಲ್ಲಿ ದಿನಾಲು ಎಷ್ಟೊ ಕಡೆ ಎಷ್ಟೊ ಜನರು ಹೀಗೆ ವರ್ತಿಸುತ್ತಿರಬಹುದಲ್ಲ ? ಅವರಿಗಾಗದ ಅಂತರ್ವ್ಯಥೆ ನನ್ನನ್ನೆ ಯಾಕೆ ಪೀಡಿಸಬೇಕು ? ಅಥವಾ ವ್ಯಭಿಚಾರವನ್ನು ದಕ್ಕಿಸಿಕೊಳ್ಳ-ಲಾರದಷ್ಟು ಪುಕ್ಕನೆ ನಾನು ?

ಛೆ! ‘ ವ್ಯಭಿಚಾರ ’ ಎಂದು ಕುಮುದಳನ್ನು ಅವಮಾನಗೊಳಿಸುತ್ತಿದ್ದೇನೆ. ಅದು ವ್ಯಭಿಚಾರವಲ್ಲ. ನಿಜವಾಗಿಯೂ ಅದು—

ಅದು ಏನು ? ಪ್ರೇಮವೊ ? ಕಾಮವೊ ?

ಇಂದಿಗೂ ಮಾತು ಮಾತಿಗೆ ಸರಲೆಯ ನವಿನೆನಪು ತನಗೆ ಬರುತ್ತಿದ್ದುದರಿಂದ ತನ್ನ ಪ್ರೇಮ ಇಂದಿಗೂ ಸರಲೆಯಲ್ಲಿಯೆ ಎಂದು ನಂಬಿದ್ದಾನೆ. ಯಾಕೆ ? ಇಬ್ಬರನ್ನು ಒಂದೇ ರೀತಿ – ಪ್ರೀತಿಸಲು ಶಕ್ಯವಿಲ್ಲವೆ ? ಇಲ್ಲವೆ ಮದುವೆಯಾದನಂತರ ಕಾಮಜೀವನ ನಡೆಯಿತೆಂದು ಮೊದಲನೆಯ ಹೆಂಡತಿಯಲ್ಲಿ ಪ್ರೇಮ, ಕಾಮಜೀವನದ ತರುವಾಯ ಮದುವೆಯಾಯಿತೆಂದು ಎರಡನೆಯವಳಾದ ಕುಮುದಳಲ್ಲಿ ವ್ಯಭಿಚಾರ ಎನ್ನಬೇಕೆ ?

ಒನ್ಮೊಮ್ಮೆ ಕುಮುದಳಲ್ಲಿಯೂ ತನ್ನ ಪ್ರೇಮವಿದೆ – ಅಲ್ಲ ಪ್ರೇಮವಿತ್ತು – ಯಾಕೆ ಇರಬಾರದು – ಎಂದೆನ್ನಿಸುವುದು ರಾಮಣ್ಣನಿಗೆ. ಅಂದು ತಾನು ಸೀರೆಯನ್ನು ತೆಗೆದುಕೊಂಡು ಹೋದಾಗ ಕುಮುದಳು ಮನೆಯಲ್ಲಿಲ್ಲದ್ದಕ್ಕೆ ಮೊದಲ ಕ್ಷಣ ತನ್ನ ಅಂತಃಕರಣ ಶೂನ್ಯ ಎನ್ನಿಸಿತ್ತಲ್ಲವೆ ? ಅದು ಪ್ರೇಮದ ಲಕ್ಷಣವಲ್ಲವೆ ? ಮುಂದೆ ಮರುಗಳಿಗೆಯ ಮಾತು ಬೇರೆ, ಆಗ ತಾನು ಬುದ್ಧಿಪೂರ್ವಕವಾಗಿ ವಿಚಾರಮಾಡಿ ಒಳಗಿನ ಕುದಿಯಿಂದ ನಗೆಯ ಕಿಡಿಗಳನ್ನು ಹಾರಿಸಿದ್ದನು. ಆದರೆ ಮೊದಲ ಕ್ಷಣದ ಅಂತಃಶೂನ್ಯತೆಯ ಅರ್ಥವೇನು ?

ಆದರೂ ರಾಮಣ್ಣನಿಗೆ ಸಂದೇಹ. ಕುಮುದಳಲ್ಲಿ ತನ್ನ ನಿಜವಾದ ಪ್ರೇಮವಿದ್ದರೆ ಅವಳಿಗೆ ತಾನು ಇಷ್ಟೊಂದು ಅಸಹ್ಯನಾಗುತ್ತಿರಲಿಲ್ಲ. ಇಂದಿಗೆ ಹತ್ತು ವರ್ಷಗಳಾದುವು ಒಬ್ಬರೊಬ್ಬರ ಸಾಮೀಪ್ಯವನ್ನು ಬಯಸದೆ ಸಂಸಾರ ನಡೆಯಿಸಿ. ಇಷ್ಟಾದರೂ ತನಗೆ ಬೇರೆ ಕಡೆ ಆಸಕ್ತಿಯೆ ಹುಟ್ಟಿರಲಿಲ್ಲವಲ್ಲ ? ಇದು ನಿಜವಾದ ಪ್ರೇಮದ ಲಕ್ಷಣವಿರಬಹುದೆ ?

ವಿಚಾರಗಳ ಭಾರದಿಂದ ದಣಿದವನಂತಾಗಿ ರಾಮಣ್ಣ ಮತ್ತೆ ಕುರ್ಚಿಯಲ್ಲಿ ಕುಳಿತುಕೊಂಡ. ತಟ್ಟನೆ ಕುಮುದಳ ಮೂರ್ತಿ ಅವನ ಕಣ್ಣೆದುರು ನಿಂತಿತು. ..ಅತ್ತಿತ್ತ ನೋಡಿದ, ಸಾಕ್ಷಾತ್ತಾದ ಕುಮುದಳಿದ್ದಿರಲಿಲ್ಲ. ತನ್ನ ಮನಸ್ಸು ನಿರ್ಮಿಸಿಕೊಂಡ ಮೂರ್ತಿ . .ಮನಸ್ಸಲ್ಲ, ತನ್ನ ಸ್ಮೃತಿ ಮುಂದೆ ತಂದು ನಿಲ್ಲಿಸಿದ ಮೂರ್ತಿ. ಹತ್ತು ವರ್ಷಗಳ ಹಿಂದೆ, ಆಕೆ ಮನೆಯಲ್ಲಿಲ್ಲ

ದಾಗ, ತಾನು ಸರಿಯಾಗಿ ಊಹಿಸಿ ಆಕೆಯ ಸೋದರತ್ತೆಯ ಮನೆಗೆ ಬಂದಾಗ ಎದುರು ನಿಂತ ಮೂರ್ತಿ.

ಆಕೆಯ ಮುಖದಲ್ಲಿ ಮುಗುಳ್ನಗೆ ಮಿನುಗುತ್ತಿದ್ದುದನ್ನು ಕಂಡು ರಾಮಣ್ಣ ಹೆದರಿಕೊಂಡಿದ್ದ. ದಾರಿಯುದ್ದ ಅನೇಕರು ನಕ್ಕುದಕ್ಕಾಗಿ ಅವನಲ್ಲಿ ಆ ಬಗ್ಗೆ ಹೆದರಿಕೆಯುಂಟಾಗಿತ್ತು. ಹುಂ ಜನರಾದರೂ ನಗದೆ ಮಾಡುವರೇನು ?

ಕುಮುದಳು ಮನೆಯಲ್ಲಿಲ್ಲದ್ದಕ್ಕೆ ತನ್ನ ಅವಸ್ಥೆ ಏನೇನೊ ಆಗಿ ಕೊನೆಗೆ ಆಕೆ ಸೋದರತ್ತೆಯ ಊರಿಗೇ ಹೋಗಿರಬೇಕೆಂದು ಊಹಿಸಿದ್ದ ; ಇಷ್ಟರಲ್ಲಿ ಅನೇಕ ಸ್ಥಳಗಳಲ್ಲಿ ಹುಡುಕಿಯೂ ಬಂದಿದ್ದ , ಯಾರನ್ನೂ ಕೇಳುವಂತಿಲ್ಲ, ಇನ್ನೊಬ್ಬರಿಗೆ ತಿಳಿಯುವಂತಿಲ್ಲ, ಹೀಗಾಗಿ ತೊಂದರೆ ಪಟ್ಟು ಅಲೆದಾಡಿ ಒಂದು ನಿಶ್ಚಯದಿಂದ ಸ್ಟೇಶನ್‍ದ ದಾರಿಯನ್ನು ಹಿಡಿದು ಬಂದಿದ್ದ ; ನಿರ್ಣಯ ಗಟ್ಟಿಮಾಡಿ ಟಿಕೆಟ್ಟನ್ನು ಕೊಂಡು ಕಂಪಾರ್ಟಮೆಂಟಿಗೆ ಹೋಗುವಷ್ಟರಲ್ಲಿ ಟ್ರೇನ್ ಹೊರಡುವ ಹೊತ್ತಾಗಿತ್ತು. ಒಳಗೆ ನುಗ್ಗಿದ; ಮಿಕ್ಕ ಅಪರ್ ಕ್ಲಾಸ್ ಪ್ಯಾಸೆಂಜರರು ಚಕಿತರಾದವರಂತೆ ತನ್ನನ್ನು ನೋಡಿದರು. ನೋಡ ವಲ್ಲರೇಕೆ ಎಂದು ಖಾಲಿ ಇದ್ದ ಬರ್ಥ್‍ನ್ನು ಆಕ್ರಮಿಸಿದ. ಮಾತಾಡುವ ಮನಸ್ಸಿರಲಿಲ್ಲ, ಮಿಕ್ಕವರೂ ಇವನನ್ನು ಮಾತಾಡಿಸಲಿಲ್ಲ, ಆಗಾಗ ಕಳ್ಳನೋಟ ದಿಂದ ನೋಡುತ್ತಿದ್ದರು ಮಾತ್ರ. ಎಷ್ಟೊ ಹೊತ್ತು ನಿದ್ರೆ ಬರಲಿಲ್ಲ. ಹೊತ್ತು ಸರಿದಂತೆ ಮಿಕ್ಕವರು ತಮ್ಮ ಹಾಸಿಗೆಯನ್ನು ಪಸರಿಸಿದರು ; ಇಷ್ಟರಲ್ಲಿ ರಾಮಣ್ಣ ದಣಿಕೆಯಿಂದ ಹಣ್ಣಾಗಿದ್ದು ಮಲಗುವ ವಿಚಾರದಿಂದ ಹಾಸಿಗೆಯನ್ನು —

ಛೂ ! ಎಂತಹ ಮೂರ್ಖ ತಾನು ! ಏನು ನಗೆಗೀಡು ತನ್ನ ಅವಸ್ಥೆ ! ತಾನು ಊರಿಗೆ ಹೊರಟಾಗ ಕೈಯಲ್ಲಿದ್ದ ಅದೊಂದೆ ಸೀರೆಯನ್ನು ಹಿಡಿದಿದ್ದ ನಲ್ಲವೆ ? ಈಗ ಅದನ್ನೆ ತನಗೆ ಹಾಸಿಗೆ ಎಂದು ಬಿಚ್ಚುತ್ತಿದ್ದಾನೆ, ಮಿಕ್ಕ ಪ್ಯಾಸೆಂಜರರಿಗೆ ಮೋಜು ತಡೆಯದಾಗಿದೆ. ಕೊನೆಗೆ ತನ್ನ ಅಪಹಾಸ್ಯ ಪರಿಸ್ಥಿತಿಗೆ ತಾನೇ ನಕ್ಕಿದ್ದ.

ಆದರೂ ಮಿಕ್ಕವರು ತನ್ನನ್ನು ಆ ಪರಿ ಕಂಡು ಇಡೀ ದಾರಿಯುದ್ದ ನಕ್ಕಿರಬಹುದಲ್ಲ ಎಂದು ರಾಮಣ್ಣ ಕುಮುದಳನ್ನು ಎದುರಿಸಲು ಅನುಮಾನಿ

ಸುತ್ತಿದ್ದ. ಯಾವ ಅವಲಕ್ಷಣ ತನ್ನ ಮುಖಲಕ್ಷಣದಲ್ಲಿ ಸುರಿಯುತ್ತಿದೆಯೊ! ಈಗ ಕುಮುದಳು ಕೂಡ ತನ್ನನ್ನು ಮುಗುಳ್ನಗೆಯಿಂದ ನೋಡುತ್ತಿದ್ದಾಳೆ. ಅಂದು ಬೆಳಗಿನಲ್ಲಿ ತನ್ನನ್ನು ಯಾವ ದೃಷ್ಟಿಯಿಂದ ಎದುರಿಸಿದ್ದಳೊ ಅದೇ ಮುಗುಳ್ನಗೆಯ ಮೂರ್ತಿ ಈಗ ರಾಮಣ್ಣನ ಕಣ್ಣು ಕಟ್ಟಿ ನಿಂತಿದೆ.

ರಾಮಣ್ಣ ಯೋಚಿಸಿದ. ಇಂದಿಗೆ ಹತ್ತು ವರ್ಷಗಳಾದರೂ ತನ್ನ ಕಣ್ಣೆದುರಿನಲ್ಲಿ ನಿಲ್ಲುವ ಕುಮುದಳ ಮೂರ್ತಿ ಅಂದಿನದೆ. ಎಷ್ಟೊಂದು ಪ್ರಯತ್ನಪಟ್ಟರೂ ಮತ್ತಾವ ಕಾಲದ ಕುಮುದಳ ಮೂರ್ತಿಯನ್ನು ನೆನೆಯಲಾರದಾಗಿದ್ದಾನೆ. ಇದೇನು ಮನಸ್ಸಿನ ಮೋಸಗಾರಿಕೆ! ಅಥವಾ ಜಗತ್ತಿನಲ್ಲಿ ಮನುಷ್ಯನ ವ್ಯವಹಾರವೇ ಹಾಗಿರುವುದೆ? ಅದಕ್ಕಾಗಿಯೆ ಶಂಕರಾಚಾರ್ಯರು ಜಗತ್ತು ಮಾಯೆ ಎಂದು ಹೇಳಿರಬಹುದೆ? ಯಾವ ವಸ್ತುವೂ ತಾನು ಇದ್ದಂತೆ ಕಂಡು ಬರುವುದೆ ಇಲ್ಲವೇನು? ನೋಡುವವನ ಇಷ್ಟವಿದ್ದಂತೆ ಒಲವಿದ್ದಂತೆ ಆ ವಸ್ತುವಿಗೆ ಸ್ವರೂಪ ಬರುವುದಲ್ಲದೆ ಅದೇ ಸ್ವರೂಪ ಕೊನೆಯವರೆಗೂ ಮೂಡಿ ನಿಲ್ಲುವುದು.

ಹುಂ. ತತ್ವಜ್ಞಾನದೊಡನೆ ಇಷ್ಟೊಂದು ತಿಣಿಕಿದರೂ ವ್ಯರ್ಥ, ಆತ್ಮವಂಚನೆ. ಇದ್ದುದನ್ನು ಒಪ್ಪಿಕೊಳ್ಳಲೇಬೇಕು. ಕುಮುದಳು ತನ್ನನ್ನು ಮೊದಲು ಆಕರ್ಷಿಸಿದ್ದು ಕಾಮಮೋಹಕವಾಗಿ, ಯಾವಾಗಲೂ ತನ್ನ ಕಣ್ಣೆದುರು ನಿಲ್ಲುವುದು ಆ ಕಾಮಮೋಹಕ ಮೂರ್ತಿಯೆ. ಬಾರೆಂದು ಸೂಚ್ಯವಾಗಿ ಸಂಕೇತಿಸುವವೇನೊ ಎನ್ನುವ ನೋಟದ ಕಣ್ಗಳು, ಕಂಡೊಡನೆ ತಬ್ಬಬೇಕೆನ್ನುವಂತೆ ತುಂಬಿದ ತೋಳ್ಗಳು, ಹತ್ತಿರ ಸುಳಿದಲ್ಲಿ ಲೋಹ ಚುಂಬಕದಂತೆ ಸೆಳೆದುಕೊಳ್ಳುವ ತುಟಿಗಳು, ತುಂಬಿದ ಎದೆ, ಆಕೆಯ ಹೆಜ್ಜೆಗೆ ತನ್ನ ಮೈ ನಡುಗುವುದೇನೊ ಎಂಬಂತೆ ತುಳುಕುವ ತೊಡೆಗಳು—

ತನಗೆ ನಾಚಿಕೆ ಇಲ್ಲವೆ ಎಂದೆನ್ನಿಸುವುದು ಒಮ್ಮೊಮ್ಮೆ. ಆದರೆ ಅಲ್ಲಿ ನಾಚಿಕೆಯ ಪ್ರಶ್ನವೆ ಇದ್ದಿರಲಿಲ್ಲ; ತಾನು ಬುದ್ಧಿಪೂರ್ವಕವಾಗಿ ಕಲ್ಪಿಸಿಕೊಳ್ಳುವ ಚಿತ್ರವದಾಗಿರಲಿಲ್ಲ, ಅದನ್ನು ಅಳಿಸುವ, ಮರೆಯಿಸುವ ಶಕ್ತಿಯೂ ತನಗಿದ್ದಿರಲಿಲ್ಲ. ಅಂದು ಸೋದರತ್ತೆಯ ಮನೆಗೆ ಹೋದಾಗ ಸಾಕ್ಷಾತ್ತಾಗಿ ಕುಮುದಳೆ ಎದುರು ನಿಂತಾಗ, ಆಕೆಯ ಮುಖದಲ್ಲಿ ಮುಗುಳ್ನಗೆಯನ್ನು ಕಂಡಾಗ ರಾಮಣ್ಣನ ಕಣ್ಗಳಿಗೆ ಕತ್ತಲೆಗಟ್ಟಿದಂತಾಗಿತ್ತು ಒಂದು ಕ್ಷಣ.

ಓಹೊ ! ರಾಮಣ್ಣನಿಗೆ ಸರಿಯಾಗಿ ನೆನಪಿಗೆ ಬಂದಿತು. ಸೀರೆಯನ್ನು ಒಯ್ದುದ್ದು ಆಗಲ್ಲ, ಎರಡನೆಯ ಸಲ. ಮುಂಚೆ, ಮೋಹನನು ಹುಟ್ಟುವ ಮುಂಚೆ, ಮದುವೆಯಾದ ಕೆಲವೇ ದಿನಗಳಲ್ಲಿ ಕುಮುದ ಸೋದರತ್ತೆಯ ಮನೆಗೆ ಮೊದಲ ಸಲ ಹೋಗಿದ್ದಳಲ್ಲ ? ಆಗೊಮ್ಮೆ ತನ್ನ ಅವಸ್ಥೆ ಹಾಗೇ ಆಗಿದ್ದಿತು. ಆಗಲೂ ಕುಮುದ ನಗೆಮೊಗದಿಂದಲೆ ತನ್ನನ್ನು ಇದಿರಿಸಿದ್ದಳು. ಆಗ ! ಈಗ ! ಯಾವಾಗಾದರೇನು ? ಕುಮುದಳನ್ನು ನೆನೆದಾಗೊಮ್ಮೆ ಆಕೆಯ ಒಂದೇ ಸ್ವರೂಪದ ಮೂರ್ತಿ ತನ್ನ ಕಣ್ಣೆದುರು ನಿಲ್ಲುವುದು. ಆಗ, ಮೊದಲ ಸಲ, ಇನ್ನೂ ಮೋಹನನನ್ನು ಹಡೆಯುವ ಮುಂಚಿತ, ಮದುವೆಯ ಶಾಸ್ತ್ರ ಮುಗಿದಾಗ, ಅಕಸ್ಮಾತ್ತಾಗಿ ತನಗೆ ಅಸಹ್ಯಪಟ್ಟು ಹೋಗಿದ್ದಳಲ್ಲ ! ಅಂದಿನ ಅನುಭವ ನೆನೆಪರೆ ಇಂದಿಗೂ ಮೈಜುಮ್ಮೆನ್ನುವುದು ; ನಗೆಮೊಗದಿಂದ ಆಕೆ ನಿಂತಿದ್ದಾಳೆ, ಅವಾಕ್ಕಾಗಿ ತಾನು ನಿಂತಿದ್ದಾನೆ. ತಾಯ್ತನ ಮೂಡುತ್ತಿರುವುದಕ್ಕಾಗಿಯೊ ಏನೊ, ಆಕೆಯ ಮುಖದಲ್ಲಿ ಹಿರಿತನದ ಕಳೆ ಇದೆ, ಕಣ್ಗಳಲ್ಲಿ ಕನಿಕರ ದೃಷ್ಟಿ ಇದೆ ; ಅದನ್ನು ಎದುರಿಸದಾಗದೆ ತಾನು ಅಪರಾಧಿಯಂತೆ ನಿಂತಿದ್ದಾನೆ. ಎಷ್ಟೊತ್ತು ಹಾಗೇ ನಿಲ್ಲಬೇಕಾದೀತೊ ಎಂಬ ಹೆದರಿಕೆ. ಆ ಮೂರ್ತಿ ಅಷ್ಟೊತ್ತು ಎದುರು ನಿಂತರೆ ತಾನು ಎಚ್ಚರದಪ್ಪಿ ವರ್ತಿಸಬಹುದು – ಇದು ಖಂಡಿತ—ಎನ್ನುವಷ್ಟರಲ್ಲಿ ಒಳಗಿನಿಂದ ಮುದಿ ದನಿ ಕೇಳಬಂದಿತ್ತು :

"ಕುಮುದೀ, ಯಾರೇ ಒಬ್ಬ ಗಂಡಸು ಬಂದವರು ?"

ಏನೆಂದು ಉತ್ತರ ಕೊಡುವಳು ? ತನ್ನ ಪರಿಚಯವಿಲ್ಲವೆಂದೆ ? ಗೆಳೆಯನೆಂದೆ ? ದೂರದ ಆಪ್ತನೆಂದೆ ? ಯಾವನೊ ಘಟಿಂಗ – ಎಂದೇ ?

"ಅತ್ತೀ, ನಮ್ಮವರು ಬಂದವರು. ಬಾ ಇಲ್ಲಿ."

ಆ ಕ್ಷಣ ರಾಮಣ್ಣನಿಗೆ ಧೈರ್ಯ ಬಂದಿತ್ತು, ಭರವಸೆಯೂ ಆಗಿತ್ತು– ಕುಮುದ ಇನ್ನೂ ತನ್ನನ್ನು ಪ್ರೀತಿಸುತ್ತಾಳೆಂದು. "ನಮ್ಮವರು" ಎಂದಳಲ್ಲ —"ನನ್ನವರು" ಎನ್ನಲಿಲ್ಲ. ಅಷ್ಟೊಂದು ಆತ್ಮೀಯತೆ ಇದ್ದಂತಿಲ್ಲ.

"ಅಯ್ಯ ! ನಿನ್ನ ಗಂಡ ಏನು ? ಹೀಂಗ್ಯಾಕ ಬಂದಾನ ಸಾಲೀ ತಪ್ಪಿಸಿ ಬಂದ ಹುಡುಗನ್ಹಾಂಗ ?" ಎನ್ನುತ್ತ ಮುದುಕಿ ಕೋಣೆಯೊಳಕ್ಕೆ ಬಂದಿದ್ದಳು.

ಚಿತ್ರದಲ್ಲಿಯ ಗೊಂಬೆಗಳಂತೆ ತಾವಿಬ್ಬರೂ ನಿಂತುದನ್ನು ನೋಡಿ ಮುದುಕಿಯ ಕಣ್ಣುಗಳಲ್ಲಿ ಕಿಡಿಗೇಡಿತನ ಚಿಮ್ಮಿತ್ತು.

"ಯಾಕಪ್ಪ, ಮದಿವೀಗೆ ಈ ಮುದುಕೀನ್ನ ಕರೀದಿದ್ರೂ ಚೊಚ್ಚಲ ಬಾಣಂತಿತನ ಮಾತ್ರ ನನ್ನ ಮ್ಯಾಲೇ ಹೇರಿದೆಯಾ ?"

ತಾನು ಉತ್ತರವನ್ನು ಕೊಡದೆ ಹುಚ್ಚನಂತೆ ಹಲ್ಲು ಕಿರಿದಿದ್ದನೇನೊ !

"ನಗು, ಅಪ್ಪ, ನಗು. ಒಂದಿಲ್ಲ ಒಂದು ದಿನ ಎಲ್ಲಾರೂ ಹೀಂಗೇ ಮುದುಕರಾಗೋರು. ಅದಕ್ಕ ಹರೇತನ ಇದ್ದಾಗ ನಗತಾ, ಕೆಲೀತಾ ಇರ್ಬೇಕು. ಹೀಂಗ್ಯಾಕ ನಿಂತೀದೆಯೆ, ಕುಮುದೀ ? ಮನೀಗೆ ಬಂದವ್ರಿಗೆ ಕೂಡಂತ ಹೇಳ್ಬಾರ್ದ ?"

"ಮನೀ ನಿನ್ದು, ಅತ್ತೀ."

"ಯಜಮಾನ ನಿನ್ನವ. ನೀನಿದ್ದಲ್ಲಿ ಅವನ ಮನೆ. ಕೂಡಪ್ಪ. ವಿಶ್ರಾಂತಿ ತಗೋ, ಆಕೆ ಊರ ಸುದ್ದಿ ಹೇಳಿ ನಿನ್ನ ತಲೆ ಎಬ್ಬಿಸಲಿಲ್ಲ ಅಂದ್ರ. ನಾನು ಚಾ ಮಾಡಿಕೊಂಡು ಬರ್ತೀನಿ, ಆ ಮ್ಯಾಲೆ ಸ್ನಾನಾ ಮಾಡೀಯಂತ. ಹೆಂಡತಿ ಎಲ್ಲಿ ಹೋಗತಿದ್ದಳೊ, ಬಂದ ಮರುದಿವಸ ಹಿಂದಿನಿಂದ ಓಡಿ ಬರಲಿಕ್ಕೆ."

ತನ್ನ ಉತ್ತರವನ್ನು ಅಪೇಕ್ಷಿಸದೆ, ಕೊನೆಯ ಮಾತನ್ನು ತನ್ನಷ್ಟಕ್ಕೆ ಹೇಳಿಕೊಳ್ಳುತ್ತ ಮುದುಕಿ ಹೋದ ಮೇಲೆ ರಾಮಣ್ಣನಿಗೆ ತುಸು ಧೈರ್ಯ ಬಂದಿತ್ತು.

"ಕುಮುದ – ?"

"ಏನು ?"

"ನನ್ನ ಮೇಲೆ ಸಿಟ್ಟೆ ?"

"ಯಾಕೆ ?"

"ಮದುವೆ ನಿನಗೆ ಬೇಕಿರಲಿಲ್ಲವೆ ?"

"ಇಲ್ಲವಾದರೆ ಬೀದಿಯ ಬಸವಿಯಾಗುತ್ತಿದ್ದೆ. ನಿಮ್ಮ ಕರುಣೆಯಿಂದ ಉಳಿದೆ."

"ತಿಳೀತು. ನನ್ನ ಮ್ಯಾಲೆ ಸಿಟ್ಟು ನಿನಗೆ."

"ನಿಮ್ಮ ಮ್ಯಾಲೆ ಅಲ್ಲ, ನನ್ನ ಮ್ಯಾಲೆ."

"ಆಂ ?"

"ನಿಂ ಸವಿಮಾತಿಗೆ ಮೋಸಬಿದ್ದು—"

"ಕುಮುದಾ, ಕುಮುದಾ, ಹಾಗನ್ನಬ್ಯಾಡ. ಮನಸಾ ಮದಿವಿ ಆಗೀವಿ ಇಬ್ಬರೂ."

"ಮದಿವೆ ಆದದ್ದಕ್ಕ, ಹುಟ್ಟ್ಯೋ ಕೂಸಿಗೆ, ಹೆಸರಿನ ಮುಂದೆ ತಂದೇ ಹೆಸರು ಸಿಕ್ಕಿತು. ನನ್ಗೇನು—"

"ಕುಮುದಾ, ನಿನ್ನನ್ನ ಮನಃಪೂರ್ವಕ—"

"ಸಾಕು ನಿಮ್ಮ ಮನಃಪೂರ್ವಕ. ಸಾಹಿತಿಗಳು ನೀವು, ಶಬ್ದದ ಮಹತ್ತ್ವ ಗೊತ್ತು; ಅದಕ್ಕೇ 'ಮನಃಪೂರ್ವಕ' ಅಂತೀರಿ, 'ಪ್ರೇಮ ಪೂರ್ವಕ' ಅಂತ ತಪ್ಪಿ ಕೂಡಾ—"

"ಯಾಕ, ಕುಮುದೀ, ಇನ್ನೂ ಮಾತಾಡ್ತಾನೇ ಇದ್ದೀಯೇನು ?" ಎನ್ನುತ್ತ ಮುದುಕಿ ಒಳಗೆ ಬಂದಿದ್ದಳು. ಅದನ್ನು ರಾಮಣ್ಣ ಎಂದೂ ಮರೆಯುವಂತಿರಲಿಲ್ಲ. ಆಗ ಆ ಮುದುಕಿ ಬಂದಿರಲಿಲ್ಲವೆಂದರೆ ಸಂನಿವೇಶದ ಆವೇಶದಲ್ಲಿ ತಾನು ಏನನ್ನಾದರೂ ಹೇಳಿ ಬಿಡುತ್ತಿದ್ದನೇನೊ ! ಮುದುಕಿಯ ಪ್ರವೇಶದಿಂದ ಸಂನಿವೇಶದ ರಸ-ಆವೇಶಗಳ ಭಂಗವಾಯಿತು. ಅದರಿಂದಲೆ ತನಗೆ ಧೈರ್ಯ ಬಂದಿತ್ತೇನೊ ! ಕುಮುದಳಿಗೆ ಆಗ ಹೇಳಿದ ಮಾತನ್ನು ಈಗಲೂ ತನಗೆ ತೊಡಕಾಗಿದ್ದುದನ್ನು ಅನುಭವಿಸುತ್ತಾನೆ. ಹತ್ತು ವರ್ಷಗಳಾದುವು, ತೊಡಕು ಬಿಟ್ಟಿಲ್ಲ.

ಕುಮುದಳನ್ನು ತಾನು ಪ್ರೀತಿಸಬಲ್ಲ, ಪ್ರೀತಿಸುತ್ತಾನೆ ಎನ್ನಬಹುದು; ಆದರೆ ಸರಲೆಯ ಸ್ಮರಣೆ ಮಸಕಾಗುವವರೆಗೆ ಕುಮುದಳಲ್ಲಿ ತನ್ನ ಪ್ರೇಮ ಎಂದು ಹೇಗೆ ಧೈರ್ಯವಾಗಿ ಹೇಳಬಲ್ಲ ? ಅಂದು ಆ ಪ್ರಶ್ನವನ್ನು ಕುಮುದಳಿಗೇ ಕೇಳಿದ್ದ. ಆಕೆಯ ಉತ್ತರ ನಿಷ್ಠುರವಾಗಿದ್ದಿತು.

"ನಿಮ್ಮ ಪ್ರೇಮ ಬೇಡ, ನಿಮ್ಮೊಡನೆ ಜೀವನ ಬೇಡ" ಎಂದಿದ್ದಳು.

ಆದರೆ ಕೊನೆಗೆ ಒಪ್ಪಿದ್ದಳು, ತನ್ನ ಮನೆಯಲ್ಲಿ ಉಪಚಾರಕ್ಕಾಗಿ ಇದ್ದುಕೊಳ್ಳಲು, ಒಂದು ಕರಾರಿನ ಮೇಲೆ; ಸದ್ಯದ ಪ್ರಸೂತಿ ಆಗುವವರೆಗೆ ಆಕೆ ಸೋದರತ್ತೆಯಲ್ಲಿಯೆ ಇದ್ದುಕೊಳ್ಳುವುದು, ಆಮೇಲೆ ತನ್ನಲ್ಲಿ ಬಂದರೆ ತಾನು ಆಕೆಯೊಡನೆ ದಾಂಪತ್ಯಜೀವನದ ಅಧಿಕಾರವನ್ನು ನಡೆಯಿಸಕೂಡದು.

"ಒಪ್ಪಿದೆ, ಸಂತೋಷದಿಂದ ಒಪ್ಪಿದೆ" ಎಂದಿದ್ದನು.

ಒಪ್ಪಿದೆ ಎಂದಿದ್ದನು. ತನಗೇ ಆಶ್ಚರ್ಯ. ಯಾವ ಸಂದರ್ಭ? ಏನನ್ನು ಒಪ್ಪುತ್ತಲಿದ್ದೇನೆ?....ಕೊನೆಗೆ ಸ್ಮೃತಿ-ಚಿತ್ರಗಳನ್ನು ಅನುಭವಿಸಿದ್ದು ಲಕ್ಷ್ಯಕ್ಕೆ ಬಂದು – ದೀರ್ಘವಾಗಿ ಉಸಿರೆಳೆದು – ಕಾಳಿದಾಸ ಮಹಾಕವಿ ಎಂಬುದನ್ನು ಒಪ್ಪಿದೆ ಎಂದುಕೊಂಡನು.

## ೭

"ಅಂದು ಒಪ್ಪಿದ್ದೆ ತಪ್ಪಾಯ್ತು" ಎಂದಳು ಕುಮುದ ಎದುರು ಗೋಡೆಗೆ. ಇಂದು ತಾನು ಗಂಡನ ಸತ್ಕಾರ ಸಮಾರಂಭದಲ್ಲಿ ಅವನ ನೆರಳಿನ ಹಾಗೆ, ಅನಿವಾರ್ಯವಾಗಿ, ಎಳೆಯಲ್ಪಡುವುದು ಅಂದಿನ ತಪ್ಪಿಗೇ ತಕ್ಕ ಪ್ರಾಯಶ್ಚಿತ್ತ ಎಂದುಕೊಂಡಳು. ಏನಾದರೂ ಹೆಣ್ಣಿನ ಸ್ವಭಾವ; ಮತ್ತೆ ಕನ್ನಡಿಯತ್ತ ಮುಖ ತಿರುಗಿಸಿ ಕುಳಿತುಕೊಂಡಳು. ಮುಖ ಕಾಣ ಬೇಕು, ಸೀರೆ ಕಾಣಬಾರದು ಎಂದರೆ ಹೇಗೆ ನಡೆದೀತು ಹುಚ್ಚೀ – ಎಂದು ತನ್ನನ್ನು ತಾನೇ ಮೂದಲಿಸಿಕೊಂಡಳು. ದಾಂಪತ್ಯದ ಅನುಕೂಲ ಬೇಕು, ಅನನುಕೂಲ ಬೇಡ ಅಂದರೂ ಹೇಗೆ ನಡೆದೀತು? ಮದುವೆಯ ಮುಂಚಿತ ತಾನು ಹೇಗೆಯೆ ವರ್ತಿಸಿರಲಿ, ಈಗ ಮದುವೆಯಾದ ಗೃಹಿಣಿ, 'ಗಂಡನುಳ್ಳ ಗರತಿ–'! ಹೊಟ್ಟೆ–ಬಟ್ಟೆಗಳ ಚಿಂತೆ ಇಲ್ಲ, ಸುಖಕ್ಕೆ ಹೆಕ್ಕು ಇಲ್ಲ!

ಅಂದೇ ತಾನು ಧೈರ್ಯದಿಂದ ವರ್ತಿಸಬೇಕಾಗಿತ್ತು.

ಹೊಟ್ಟೆಯೊಳಗಿನ ಕೂಸಿಗಾಗಿ ತಾನು ಮೆತ್ತಗಾಗಿದ್ದಳು. ಅದಕಾಗಿ ಪ್ರಾರಂಭದಲ್ಲಿ ಆ ಕೂಸಿನ ಮೇಲೆ ಕುಮುದಳ ಸಿಟ್ಟು ಇದ್ದಿತು. ರಾಮಣ್ಣನ ಕೂಸು – ಅದನ್ನು ಕಂಡಾಗಲೆಲ್ಲ ರಾಮಣ್ಣನನ್ನು ಮರೆಯುವಂತಿರಲಿಲ್ಲ. ರಾಮಣ್ಣನನ್ನು ನೆನೆದಾಗಲೆಲ್ಲ — ಈಗಲೂ ಮೈ ಪುಲಕಿತವಾಗುತ್ತಿತ್ತು ಕುಮುದಳಿಗೆ!

ಒಂದು ದೃಷ್ಟಿಯಿಂದ ತನ್ನ ಆನಂದಗೋಪುರದ ಕಳಸವಾಗಿದ್ದಿತು ಆ ಕೂಸು.

"ಕುಮುದೀ, ನಿನ್ನ ಮೈ ತುಂಬೋದನ್ನ ಕಂಡರ ನೀ ಗಂಡ ಹಡೀತಿ – ಅಂತ ಕಾಣಿಸ್ತದ" ಎಂದಿದ್ದಳು ಒಂದು ದಿನ ಮನೆ–ಮುದುಕಿ.

"ಏನಾಗೋದು ಆಗ್ತದ. ಅದೇನು ಯಾರ ಕಯ್ಯೊಳಗಿನ ಮಾತೇನು, ಅತ್ತೀ" ಎಂದು ತಾನು ತುಸು ಹಿರಿತನದ ದನಿಯಲ್ಲಿಯೆ ಹೇಳಿದ್ದಳು.

"ಹುಂ. .ಈಗ ಹೇಳ್ತಾಳ ಯಾರ ಕಯ್ಯೊಳಗಿನ ಮಾತೇನು ಅಂತ?" ಎಂದು ಮುದುಕಿ ತನ್ನನ್ನು ಮೂದಲಿಸಿದ್ದಳು.

ಕುಮುದಳಿಗೆ ವಿಚಾರ ಬರುತ್ತಿದ್ದಿತು ಆಗಾಗ. ಇದೇನು ರಹಸ್ಯ? ಮನುಷ್ಯ ಪೂರ್ತಿ ಪರತಂತ್ರ ಎಂದು ಹೇಳುವುದಾಗಿದ್ದರೆ ಮನುಷ್ಯನ ಜನ್ಮವನ್ನೆ ನೋಡಬೇಕು. ತನಗೆ ಇದು ಗೊತ್ತಿದ್ದಿತೆ? ಈಗ ಕೇಳಿದರೆ "ಗೊತ್ತಿದ್ದಿತು" ಎಂದು ಹೇಳಬಹುದು, ನಿಜ. ಆದರೆ ಆಗ? ಆಗ ಬೇರೆ ಯಾವುದೂ ಗೊತ್ತಿರಲಿಲ್ಲ, ಯಾವುದರ ಅಪೇಕ್ಷೆಯೂ ಇದ್ದಿರಲಿಲ್ಲ, ಯಾವುದರ ಎಚ್ಚರವೆ ಇರುತ್ತಿರಲಿಲ್ಲ.

ಎಂತಹ ಆಶ್ಚರ್ಯ! ಈಗ, ನಡೆದುದೆಲ್ಲವನ್ನು ನೋಡಿ, ವಿಚಾರ ಮಾಡಿ, ಲೆಕ್ಕಹಾಕಿ, ಸಾಧಕ–ಬಾಧಕಗಳನ್ನು ಎಣಿಸಿದ ತರುವಾಯ ರಾಮಣ್ಣನ ಮೇಲೆ ಸಿಟ್ಟು. ಆದರೆ ಅತ್ತೆ ಹೇಳುವ ಮಾತು ನಿಜವಿದ್ದರೆ ರಾಮಣ್ಣ ಎಲ್ಲ ಗಂಡಸರಂತೆ, ಅಥವಾ ಗಂಡಸರೆಲ್ಲ ರಾಮಣ್ಣನಂತೆ. ಹಸಿದಾಗ ರುಚಿ, ಹೊಟ್ಟೆ ತುಂಬಿದ ಮೇಲೆ ನಿದ್ರೆ. ಜಗತ್ತಿನಲ್ಲಿ ರೂಢಿಯಾಗಿದೆ. ಅಥವಾ ರಾಮಣ್ಣನದಾದರೂ ತಪ್ಪೇನು? ತಪ್ಪು ತನ್ನದೂ ಇದೆ. ಚಪ್ಪಾಳೆಗೆ ಎರಡು ಕೈಗಳು ಬೇಕು. ಜೀವಕ್ಕೆ ಎರಡು ಜೀವಗಳು ಬೇಕು. ಹೊಸ ಎಲೆ ಚಿಗುರಬೇಕಾದರೆ ಹಳೆ ಎಲೆ ಉದುರಬೇಕು. ನಿಜ, ಆದರೆ ತಾನೊಬ್ಬಳೆ ಯಾಕೆ ಹಳೆ ಎಲೆ ಆಗಬೇಕು? ರಾಮಣ್ಣನೂ ಯಾಕೆ ಉದುರಬಾರದು?

ಕ್ರಮೇಣ ಕುಮುದಳಲ್ಲಿ ಒಂದು ತರದ ಮಾರ್ದವ ಮೂಡಿತ್ತು. ರಾಮಣ್ಣನ ವಿಟಗಾರಿಕೆಗೆ ಮೋಸ ಹೋದ ಅರಿಯದ ಹುಡುಗೆ ತಾನು ಎಂಬ ವಿಚಾರ ಹಿಂದೊತ್ತಿ ಒಂದು ಹೊಸಜೀವವನ್ನು ಸೃಷ್ಟಿಯಲ್ಲಿ ತಂದು ಬದುಕಿಸಿ ಬೆಳೆಯಿಸುವ ತಾಯಿ ತಾನು ಎಂಬ ವಿಚಾರ ಆಕೆಯನ್ನು ಪುಲಕಿತ ಗೊಳಿಸುತ್ತಿತ್ತು. ಆ ಯೋಗ್ಯತೆ ತನ್ನಲ್ಲಿದೆಯೆ ಎಂದು ಅನನುಭವಕ್ಕಾ ಹೆದರಿಕೆ, ಆ ಯೋಗ್ಯತೆ ತನ್ನಲ್ಲಿ ಮೂಡುತ್ತಿದೆ ಎಂಬ ದಿನದಿನದ

ಅನುಭವಕ್ಕಾಗಿ ಉತ್ಸಾಹ. ತೊಡೆಗಳು ಭಾರವೆನ್ನಿಸಿದಷ್ಟು ಸಂತೋಷ; ಹುಟ್ಟಿದ ಮಗುವನ್ನು ಕೂಡಿಸಿ, ಆಡಿಸಿ ಬೆಳೆಯಿಸಲು ಆಧಾರವಾಗುವಷ್ಟು ಶಕ್ತಿ ಅವುಗಳಿಗೆ ಬೇಕಲ್ಲವೆ? ಒಮ್ಮೊಮ್ಮೆ ಯಾವುದೋ ಒಂದು ಹೇಳಲಾಗದ ವೇದನೆ ಹೃದಯದೊಳಗೆ; ಅಲ್ಲ, ಹೃದಯದ ಒಳಗಲ್ಲ, ಮಗುವಿನ ಆಹಾರಕ್ಕಾಗಿ ಪೂರ್ವ ಸಿದ್ಧತೆ ನಡೆದ ಹೊರಗಿನ ಶಾರೀರಿಕ ಪರಿಶ್ರಮ ಅದು ಎಂದು ಸಂತೋಷಗೊಳ್ಳುವಳು.

ಪಾಪ! ರಾಮಣ್ಣನ ಮೇಲೆ ಸಿಟ್ಟಾಗಿ ಪ್ರಯೋಜನವೇನು—ಎಂದು ಕೊಳ್ಳುವಳು ಆಗಾಗ. ಎಷ್ಟಾದರೂ ಗಂಡಸು! ಕ್ಷಣಿಕ ಬುದ್ಧಿ, ಕ್ಷಣಿಕ ಸುಖದ ಲೋಭ! ಚಿರಂತನ ತಾಯ್ತನದ ಸುಖದ ಅನುಭವ ಗಂಡಸಿಗಿರುವುದಿಲ್ಲ. ಎಲ್ಲ ಗಂಡಸರಂತೆ ರಾಮಣ್ಣ ಎಂದು ಅವನಿಗಾಗಿ ಕನಿಕರಪಡುವಳು. ಅದೇ ವಿಚಾರಸರಣಿಯಲ್ಲಿ ತನಗೆ ಗಂಡುಮಗು ಹುಟ್ಟುವುದೆಂಬ ಭರವಸೆಯಲ್ಲಿ ಆ ಗಂಡಿಗಾಗಿಯೂ ಒಮ್ಮೊಮ್ಮೆ ಕನಿಕರಪಡುವಳು. ಕನ್ನಡಿಯ ಮುಂದೆ ಕುಳಿತಾಗೊಮ್ಮೆ ಹೆಮ್ಮೆಯ ಮುಗುಳ್ನಗೆ ಆಕೆಯ ಮುಖದಲ್ಲಿ ಮೂಡುವುದು. ಹುಚ್ಚು ಗಂಡಸು! ಇಂತಹ ಸೌಂದರ್ಯಕ್ಕಾಗಿ ಮೋಹಿತನಾದುದರಲ್ಲಿ ಆಶ್ಚರ್ಯವೇನು?

ಒಮ್ಮೊಮ್ಮೆ ವಿಚಾರಸರಣಿಯಲ್ಲಿ ಸರಳಕ್ಕ ಸ್ಮರಣೆಗೆ ಬರುವಳು. ಪಾಪ! ಯಾವ ಸುಖವನ್ನೂ ಕಾಣದೆ ಮರಮರಮರುಗಿ ಜೀವ ಬಿಟ್ಟಳಲ್ಲ! ಮನೆ ಅಂದ್ರೆ ಮಕ್ಕಳು–ಮರಿ ತುಂಬಿರಬೇಕು ಎನ್ನುತ್ತಿದ್ದಳು ಆಕೆ. ಹುಂ....ಆಗ ತಾನು ಎಂತಹ ಅರಿಯದ ಮುಗ್ಧೆಯಾಗಿದ್ದಳು! ಒಂದು ದಿನ, ಅಕ್ಕನ ಜೊತೆ ಮಾತನಾಡುತ್ತಿದ್ದಾಗ ತಾನು ಕೇಳಿದ ಪ್ರಶ್ನೆ ಎಷ್ಟು ಹುಚ್ಚು-ತನದ್ದಿತ್ತು!

"ನೋಡು, ಕುಮುದಾ, ಹೆಂಗಸಿನ ಸುಖ ಅಂದ್ರೆ ತನ್ನದು ಅನ್ನೋ ಮನೆ, ಹೊಟ್ಟೆ ತುಂಬಿ ತಿಂದು ದಕ್ಕಿಸಿಕೊಳ್ಳೋ ಗಂಡ, ಮನೇ ತುಂಬ ಓಡಾಡೋ ಮಕ್ಕಳು."

"ನಿನಗ ನಿನ್ನ ಮನೆ ಅದ—"

"ತಿನ್ನೋದು ನೆನಪಾದರ ಮಾತ್ರ, ತಿಂದದ್ದನ್ನ ದಕ್ಕಿಸಿಕೊಳ್ಳೋ ಗಂಡ ಇದ್ದಾರ" ಎಂದು ಸರಳಕ್ಕ ನಗೆಯಿಂದಲೆ ಹೇಳಿದ್ದಳು.

"ಆಯ್ತಲ್ಲ, ಇಂದಿಲ್ಲ ನಾಳೆ ಮಕ್ಕಳೂ ಆಗ್ತಾವ."

ತನ್ನ ಮಾತಿಗೆ ಅಕ್ಕ ದೀರ್ಘವಾಗಿ ಉಸಿರೆಳೆದು ಮಲಗಿದಲ್ಲಿಯೆ ಮಾಳಿಗೆಯನ್ನು ನೋಡುತ್ತ ಸ್ತಬ್ಧಳಾಗಿದ್ದಳು.

"ಆ ಮ್ಯಾಲೆ—"

"ಹುಚ್ಚಿ ನೀನು" ಎಂದಿದ್ದಳು ಅಕ್ಕ.

ತನಗೆ ಏನೂ ತಿಳಿದಿರಲಿಲ್ಲ. ಗಂಡನಿದ್ದರೆ ಮಕ್ಕಳಾಗಲೇ ಬೇಕು ಎಂಬುದನ್ನು ಸಿದ್ಧಾಂತವಾಗಿ ತಾನು ತಿಳಿದುಕೊಂಡಿದ್ದಳು.

"ಹುಚ್ಚಿ ನೀನು, ಕುಮುದಾ. ಈ ಜಡ್ಡಿನಿಂದ ನಾನು ಸುಧಾರಿ ಸೋದೆ ಕಠಿಣ—"

"ಅಕ್ಕಾ!"

"ಒಂದ್ವೇಳೆ ಸುಧಾರಿಸಿದೆ ಅಂತ ತಿಳಿ. ಆಗಲೂ ಮಕ್ಕಳ ಸುಖ ನನ್ನ ಪಾಲಿಗಿಲ್ಲ."

"ಯಾಕ ?"

ಸರಳಕ್ಕ ಕಿಲಕಿಲ ನಕ್ಕಿದ್ದಳು. ನಗೆಯಿಂದ ಆಕೆಯ ಮುಖ ಆಯಾಸ ಗೊಂಡು ಇನ್ನಿಷ್ಟು ಸುಂದರವಾಗಿ ಕಂಡಿದ್ದಳು.

"ಯಾಕ-ಅಂತ ? ಯಾಕ – ಏನು – ಅಂಬೋದೆಲ್ಲಾ ನಾಳೆ ನಿನಗೇ ತಿಳಿದೀತು ಮದುವೆ ಆದ ಮ್ಯಾಲೆ." ಎಂದಿದ್ದಳು ಅಕ್ಕ.

ಅಂದ್ರೆ ? ಮದುವೆ ಆದ್ರೂ ಮಕ್ಕಳು ಆದಾವು ಅನ್ನೋ ಭರವಸೆ ಇಲ್ಲ, ಹೆಂಗಸು ತಾಯಿ ಆಗಿಯೇ ಆಗುವಳು ಎಂಬ ಭರವಸೆಯೂ ಇಲ್ಲ! ಈ ಗೂಢ ಏನು – ಎಂಬುದು ತಿಳಿದಿರಲಿಲ್ಲ ತನಗೆ ಆಗ.

ಆಗ ತಿಳಿದಿರಲಿಲ್ಲ, ಮುಂದೆ ತಿಳಿಯಲೂ ತಡವಾಗಲಿಲ್ಲ.

ಬುದ್ದಿ ಇದ್ದಾಗ ತಿಳಿಯಲಿಲ್ಲ, ಬುದ್ಧಿಯನ್ನು ಕಳೆದುಕೊಂಡ ಮೇಲೆ ತಿಳಿಯಿತು !

ಎಂತಹ ಉದ್ವಿಗ್ನ ಮನಸ್ಕಳಾದಾಗೂ ಕುಮುದಳಿಗೆ ಆ ನೆನಪುಗಳಿಂದ ಹೃದಯದಲ್ಲಿ ಹೊಸ ಚೈತನ್ಯ ಹರಿದಾಡಿದಂತಾಗುತ್ತಿತ್ತು.

ಬುದ್ಧಿ ಕಳೆದುಕೊಂಡ ಮೇಲೆಯೆ ತಿಳಿಯಿತು.

ಕುಮುದಳಿಗೆ ಈಗಲೂ ಆಶ್ಚರ್ಯ, ಆಗಿನ ತನ್ನ ಮನಃಸ್ಥಿತಿಯನ್ನು

ನೆನೆದುಕೊಂಡು. ಒಂದು ಕಾಲವಿದ್ದಿತು, ಆಗ ರಾಮಣ್ಣನನ್ನು ನೋಡಿದೊಡನೆ, ರಾಮಣ್ಣನನ್ನು ನೆನೆದ ಮಾತ್ರಕ್ಕೆ ಬುದ್ಧಿ ತನ್ನ ವಶವನ್ನು ತಪ್ಪಿಸಿಕೊಂಡು ಹೋಗುತ್ತಿತ್ತು. ಯಾಕೆ ಹಾಗಾಗುತ್ತಿದ್ದಿತೊ ? ಎಲ್ಲರಿಗೂ ಹಾಗೆಯೆ ಆಗುವುದೆ ಎಂಬುದರ ಬಗ್ಗೆ ಕುಮುದಳಿಗೆ ನಿಶ್ಚಿತ ಭಾವನೆ ಇದ್ದಿರಲಿಲ್ಲ. ತನ್ನದು ಮಾತ್ರ ಹಾಗಾಗುತ್ತಿತ್ತು. ಬುದ್ಧಿ, ಶರೀರ ಎರಡರ ಮೇಲೂ ವಶವಿರುತ್ತಿದ್ದಿಲ್ಲ. ಯೋಗಿಗಳ ಮಾತನ್ನು ಹೇಳುವರಲ್ಲ ? ಪ್ರತ್ಯಕ್ಷವಿಲ್ಲದ್ದು ಅವರಿಗೆ ಕಾಣುವುದಂತೆ, ಶರೀರದ ಸುಖದುಃಖಗಳ ಅರಿವು ಅವರಿಗೆ ಇರುವುದಿಲ್ಲವಂತೆ. ಮೋಹನನ ತಾಯಿಯಾಗುವ ಅರ್ಹತೆಯನ್ನು ಪಡೆಯುವ ಮುಂಚಿತ ತಾನೂ ಅಂತಹ ಯೋಗ ಸಿದ್ಧಿಯನ್ನೆ ಪಡೆದುಕೊಂಡಿದ್ದಳೇನೊ !

ತನಗೆ ಇನ್ನೂ ನೆನಪಿದೆ ಒಂದು ದಿನ ನಡೆದ ಘಟನೆ. ಅಂದು ತನ್ನ ಕತೆ ಮುಗಿಯಿತೆಂದೇ ತಿಳಿದಿದ್ದಳು. ತನ್ನ ರಹಸ್ಯ ಸರಳಕ್ಕನಿಗೆ ಗೊತ್ತಾಯಿತೆಂದು ಅವಳ ಮನವರಿಕೆಯಾಗಿಬಿಟ್ಟಿತು. ಅಂದಿನ ತನ್ನ ಅನುಭವ ಮುಂದೆ ತನಗೆಯೆ ಆಶ್ಚರ್ಯವನ್ನುಂಟುಮಾಡಿತ್ತು.

ನಡೆದದ್ದೇನೊ ಸಣ್ಣ ಮಾತು. ರಾತ್ರಿ 9 ಗಂಟೆಯಾಗಿರಬಹುದು, ರಾಮಣ್ಣ ಹೊರಗೆ ಹೋದವನು ಇನ್ನೂ ಬಂದಿರಲಲ್ಲ. ತಾನು ಊಟವನ್ನು ಮಾಡಿರಲಿಲ್ಲ, ಸರಳಕ್ಕನೂ ಹಾಲನ್ನು ತೆಗೆದುಕೊಂಡಿರಲಿಲ್ಲ. ಅಕ್ಕ ಅಷ್ಟೊತ್ತು ತಡೆಯುವುದು ತನ್ನ ಮನಸ್ಸಿಗೆ ಬಂದಿರಲಿಲ್ಲ. ಒಂದೆರಡು ಸಲ ಹಟದಿಂದ ಹೇಳಿದ್ದಳು—

"ಅಕ್ಕಾ, ನಿನಗ ಹಾಲು ತಂದುಕೊಡಲ್ಯಾ ?" ಎಂದು ಕೇಳಿದ್ದಳು.

"ನನಗೇನವಸರ ಅದ ? ಅವರು ಬರ್ಲಿ, ಊಟ ಆಗಲಿ."

"ನಾನು ಕೂತಿರತೀನಿ, ಅಕ್ಕಾ, ಅವರು ಬರೋತನಕ—"

"ನಾನೂ ಕೂತಿರತೀನಿ, ನನ್ಗಾದರೂ ಏನು ಕೆಲಸದ ?"

"ಕೂತೀಯಂತ. ಆದರೆ ಹಾಲು ತಕ್ಕೊಂಡು—"

"ಇರಲಿ ಬಿಡೆ, ಕುಮುದಾ ! ನಾನೇನು ಹಸಿವೇಯಿಂದ ಸಾಯೋದು ಅಷ್ಟರಾಗೇ ಅದ !" ಎಂದು ಸರಳಕ್ಕನೂ ತುಸು ಬೇಸರಗೊಂಡೇ ಹೇಳಿದ್ದಳು.

ಕೆಲಹೊತ್ತು ಕಳೆಯಿತು, ಆದರೂ ರಾಮಣ್ಣ ಬಂದಿರಲಿಲ್ಲ. ತನಗೆ ಏನನ್ನಿಸಿತ್ತೊ ಏನೊ ! ತಟ್ಟನೆ "ಅಕ್ಕಾಹಾಲು ತರ್‍ತೀನಿ" ಎಂದು ಎದ್ದಿದ್ದಳು.

"ಬ್ಯಾಡ ಅಂತ ಹೇಳಿಲ್ಲೇನೆ ? ನಾನೊಬ್ಬಳೇ—"

"ನಾನೂ ಮುಗಿಸ್ತೀನಿ, ಅಕ್ಕಾ."

ಸರಳಕ್ಕನಿಗೆ ತನ್ನ ಮಾತಿನ ಅಪಾರ್ಥವಾಗಿದ್ದಿತು.

"ಅಯ್ಯ ! ಹುಚ್ಚೀ ! ನಿನಗ ಯಾರು ಬ್ಯಾಡಾ ಅಂದ್ರು ? ನಾನು ನಿನಗ ಯಾವಾಗಿನಿಂದ ಹೇಳೀನಿ. ಇನ್ನೂ ಬೆಳೆಯೋ ಹುಡುಗಿ ನೀನು, ಹಸಿವೆ ತಡೀಬಾರ್‍ದು ಅಂತ. ಹಸಿವಿ ಆಗಿದ್ದರ ನೀ ಊಟಾ ಮಾಡಿಬಿಡು, ನಾ ಕೂತಿರತೀನಿ."

"ಹಾಂಗಲ್ಲ, ಅಕ್ಕಾ. ನಾನು ಹಸಿವೆ ಆಗೇದ ಅಂತ ಅನ್ನಲಿಲ್ಲ. ಅವರು ಹೊರಗ ಅಕಸ್ಮಾತ್ತಾಗಿ ಯಾರ ಮನೀವಳಗೊ ಊಟಕ್ಕೆ ಹೋಗ್ಯಾರ."

"ಅಂದ್ರ ? ಯಾವಾಗ ಹೇಳಿದ್ದರು ?"

"ಯಾವಾಗರೇ ಹೇಳಲಿ. ಅದಕ್ಕೇ ಅಂದೆ, ಇಬ್ಬರೂ ಮುಗಿಸಿ ಬಿಡೋಣ."

"ಏನೊ – ಏನೊ ! ಯಾವಾಗ ಹೇಳಿದ್ದರೊ ಏನೊ !" ಎಂದು ಸರಳಕ್ಕ ಅಸಮಾಧಾನದಿಂದ ಗೊಣಗಿದ್ದಳು. ತಾನು ಅಕ್ಕನಿಗೆ ಹಾಲು ತಂದು ಕೊಟ್ಟು, ಒಳಗೆ ತನ್ನ ಊಟದ ತಯ್ಯಾರಿಯನ್ನು ನಡೆಸಿದ್ದಳು. ತಯ್ಯಾರಿ ಮಾಡುತ್ತಿರುವಾಗಲೆ ಹೊರಗಿನಿಂದ ಯಾರದೊ ಮಾತು ಕೇಳಿಸಿದಂತಾಯಿತು. ಲಕ್ಷ್ಯಗೊಟ್ಟು ಕೇಳಿದ್ದಳು. ಹೊರಗೆ ಯಾರೂ ಇದ್ದಿರಲಿಲ್ಲ, ಆದರೂ ತಾನು ಕೇಳಿದ್ದು ನಿಜ ಎಂದೆನ್ನಿಸಿ ತನ್ನ ಊಟದ ಸಿದ್ಧತೆಯನ್ನು ತಡೆದಿದ್ದಳು. ಕೆಲಹೊತ್ತಿನ ಮೇಲೆ ಹೊರಗೆ ಬಂದೊಡನೆ —

"ಅಯ್ಯ ! ಇಷ್ಟು ಲಗೂ ಊಟಾಯ್ತೇನ, ಕುಮುದಾ ?" ಎಂದಿದ್ದಳು.

"ಇಲ್ಲ. ಊಟ ಮಾಡಬೇಕಂದಿದ್ದೆ. ಅಷ್ಟರೊಳಗ ಏನೊ ಮಾತು ಕೇಳಿಸಿಧಾಂಗಾಯ್ತು—"

"ಯಾರ ಮಾತು ?"

"ಯಾರೂ ಇದ್ದಿರಲಿಲ್ಲ, ಆದ್ರೂ ಮಾತು ಕೇಳಿಸಿತು — "

"ಅಷ್ಟಕ್ಕ ಎದ್ದು ಬಂದೆಯಾ ? ಹೋಗು, ಇಲ್ಲಿಯೆ ತಕ್ಕೊಂಡ್ಬಾ ನಿನ್ನ ಎಲೆಯನ್ನ, ಒಬ್ಬಾಕೀನೇ ಒಳಗ ಕೂಡೋದಕಿಂತ."

"ಇಲ್ಲ, ನಾ ಇನ್ನೊಂದಿಷ್ಟು ಹಾದೀ ನೋಡ್ತೀನಿ."

"ಅವರು ಯಾರಲ್ಲಿಯೊ ಊಟಮಾಡಿ ಬರ್ತಾರ ಅಂತ ಹೇಳಿದಿಯಲ್ಲೆ ?"

"ಹೌದು, ಅಕ್ಕಾ. ಆದರೆ ಅಷ್ಟರಾಗೇ ಮಾತು ಕೇಳಿಸಿತು ಅಂದ್ನೆಲ್ಲ ?"

"ಅಂದ್ರ ? ಇವರೇ ಮನೀಗ ಬಂದಾರ, ನನಗ ತಿಳೀಧಾಂಗ ಅಂತೀ ಯೇನು ?"

"ಇಲ್ಲ, ಅಕ್ಕಾ. ಗೆಳೇರು ಹಟಮಾಡಿ ಊಟಕ್ಕ ಕರೆದುಕೊಂಡು ಹೊರಟಿದ್ದರೇನೊ ? ಇವರೂ ಹೊರಟವರು ತಟ್ಟನೆ 'ತಡ ಬಹಳ ಆಗ್ತದ, ನಾನು ಮನೀಗಿ ಹೋಗ್ತೀನಿ' ಅಂತ ಹೇಳಿ ಮನೀ ಕಡೆ ಹೊರಟ್ಹಾಂಗ—"

"ಹಸಿದ ಹೊಟ್ಟೇಲೆ ಕಣ್ಣಿಗೆ ಜಂಪ ಹತ್ತಿತ್ತು ನೋಡಿ ನಿನಗ" ಎಂದು ಅಕ್ಕ ನಗುತ್ತಿರುವಾಗಲೆ ಹೊರಬಾಗಿಲ ಸದ್ದಾಯ್ತು. ತಲೆಗೆ ಸೆರಗನ್ನು ಸುತ್ತಿಕೊಂಡು ಬಾಗಿಲನ್ನು ತೆರೆದು, ತಟ್ಟನೆ ಒಳಗೆ ಓಡಿಬಂದಿದ್ದಳು. ಯಾಕೊ ಏನೊ ! ಡಂಗುರ ಬಡೆವಂತೆ ಬಡೆದುಕೊಳ್ಳುತ್ತಿತ್ತು ಎದೆ. ಅಡಿಗೆಯ ಮನೆಯ ಮರೆಯಿಂದಲೆ ಕೇಳುತ್ತ ನಿಂತಿದ್ದಳು.

ರಾಮಣ್ಣ ಬಂದವನೆ ಅತ್ತಿತ್ತ ನೋಡಿ,

"ಓಹೊ ! ಔಷಧ - ಹಾಲು ಮುಗಿಸಿಬಿಟ್ಟೆಯಲ್ಲ ? ಚಲೋ ಆಯ್ತು! ನೀವೆಲ್ಲಿ ನನ್ನ ಸಲುವಾಗಿ ಹಾದೀ ನೋಡ್ತೀರೊ ಅಂತ ಸುಮ್ಮಸುಮ್ಮನೆ, ಅಂದ್ಕೊಂಡಿದ್ದೆ."

"ನಿಮ್ಮ ಊಟ ಆಯಿತ ?" ಸರಳಕ್ಕ ಕೇಳಿದ್ದಳು.

ರಾಮಣ್ಣನಿಗೆ ಸಂದರ್ಭವೆ ತಿಳಿದಿರಲಿಲ್ಲವೇನೊ ?

"ಏನಂದಿ ?" ಎಂದಿದ್ದ.

"ಅಲ್ಲ, ಯಾರೋ ಗೆಳೇರು ಹಟ ಮಾಡಿ ಕರೆದಿದ್ರಂತ—"

"ಆಂ ! ನಿನಗ ಯಾರು ಹೇಳಿದರು ?"

"ಕುಮುದಾ ಹೇಳಿದಳು."

"ಆಕೆಗೆ ಯಾರು ಹೇಳಿದರು ?"

"ಯಾಕ ? ನೀವೇ ಹೇಳಿರಲಿಲ್ಲೇನು ಹೋಗುವಾಗ ?"

ರಾಮಣ್ಣ ಕಕ್ಕಾವಿಕ್ಕಿಯಾಗಿ ಅತ್ತಿತ್ತ ನೋಡಿದ್ದ ತನ್ನನ್ನು ಹುಡುಕುತ್ತಿದ್ದನೇನೊ ! ಸರಳಕ್ಕನನ್ನೂ ದಿಟ್ಟಿಸಿ ನೋಡುತ್ತ ನಿಂತುಕೊಂಡ.

"ಯಾಕ ? ಏನಾಯ್ತೀಗ ? ಎಲ್ಯಾದರೂ ಊಟ ಆಯ್ತಲ್ಲ !"

ಅಕ್ಕನ ಮಾತಿಗೆ ರಾಮಣ್ಣ ಗಟ್ಟಿಯಾಗಿ ನಕ್ಕಿದ್ದ.

"ನೀವಿಬ್ಬರೂ ಹೆಂಗಸರು ಕೂಡಿ ತಡಾ ಮಾಡಿ ಬಂದದ್ದಕ ನನಗ ಉಪವಾಸದ ಶಿಕ್ಷಾ ಕೊಡ್ಬೇಕು ಅಂತ ಮಾಡಿಧಾಂಗ ಕಾಣಿಸ್ತದ. ಆದರೆ ನಾನು ತಪ್ಪು ಒಪ್ಕೋತೀನಿ, ಯಾಕಂದ್ರ ಹಸಿವೆ ಆಗೇದ."

"ಹಸಿವೆ ಆಗೇದ ? ಅಂದ್ರ, ಗೆಳೇರಲ್ಲಿ ಊಟ—?"

"ಆ ಪುಣ್ಯಾತ್ಮ ಬಹಳೇ ಹಟ ಮಾಡಿದ. ನಾನೂ ಒಪ್ಕೊಂಡು ಅರ್ಧ ಹಾದೀ ಹೋಗಿದ್ದೆ. ಆದರೆ ಅಷ್ಟರಾಗೇ ನನಗನ್ನಿಸಿತು ಇದು ಎಲ್ಲಾ ಮುಗಿಯೋದಕ ಎಷ್ಟು ತಡ ಆಗ್ತದ ಏನೊ ಅಂತ—ಅದಕ್ಕ ನಡುವೇನೇ ಅವನಿಗೆ ಹೇಳಿ ಬಂದ್ಬಿಟ್ಟೆ. ಹಹ !"

"ಅಂದ್ರ – ನಿಮ್ಮ ಊಟ ಆಗಿಲ್ಲ ?" ಸರಳಕ್ಕ ಅತ್ಯಂತವಾಗಿ ಬೆರಗಾದ ದನಿಯಲ್ಲಿ ಕೇಳಿದ್ದಳು. ರಾಮಣ್ಣ ತಲೆ ಅಲ್ಲಾಡಿಸಿದ್ದ.

"ಮೊದಲು ಹಟಕ್ಕ ಒಪ್ಪಿದಿರಿ, ಆ ಮ್ಯಾಲೆ ತಡ ಆಗ್ತದ ಅಂತ ಬಿಟ್ಟು ಬಂದಿರಿ !" ಸರಳಕ್ಕ ಅದೇ ದನಿಯಲ್ಲಿ ತನ್ನಷ್ಟಕ್ಕೆ ಮಾತನಾಡಿಕೊಳ್ಳುವಂತೆ ನುಡಿದಿದ್ದಳು.

ಮುಂದಿನ ಸಂಭಾಷಣೆಯನ್ನು ಕೇಳಲು ತಾನು ನಿಲ್ಲಲಾರದೆ ರಾಮಣ್ಣನ ಊಟದ ಸಿದ್ಧತೆಯನ್ನು ಮಾಡಿ ಮರೆಯಾಗಿದ್ದಳು. ಅಂದು ಸರಳಕ್ಕ, ರಾಮಣ್ಣ ಇಬ್ಬರೂ ತನ್ನನ್ನು ನೋಡುವ ದೃಷ್ಟಿಯು ಅರ್ಥ ತನಗಾದಂತಾಗಿತ್ತು. ಹೊರಗೆ ನಡೆದ ಸಂಗತಿಯನ್ನು ತಾನು ಸರಿಯಾಗಿ ಹೇಳಿದ್ದನ್ನು ನಂಬಲಾರರು, ನಂಬದೆ ಗತ್ಯಂತರವಿರಲಿಲ್ಲ. ಇಷ್ಟೇಕೆ ? ತಾನೇ ನಂಬದಾಗಿದ್ದಳು. ಆದರೂ ತನಗೆ ಗೆಳೆಯನ ಒತ್ತಾಯ, ರಾಮಣ್ಣನ ಅವಸರ ಎರಡರ ಬಗ್ಗೆಯೂ ಸ್ಪಷ್ಟವಾಗಿ ಮಾತು ಕೇಳಿಸಿದಂತಾಗಿತ್ತು. ತನಗೆ ಅನ್ನಿಸಿದ್ದೇ ನಿಜವಾಗಿತ್ತು. ಏನೊ – ಎಲ್ಲ ಸರಿಹೋಯ್ತು, ಹೋಯ್ತು.

ತಾನು ಕೂಡ ನಂಬದ ಮಾತಾಗಿತ್ತು. ತಾನು ನಂಬುತ್ತಲೂ ಇರಲಿಲ್ಲ, ಆ ಇನ್ನೊಂದು ಘಟನೆ ನಡೆದಿದ್ದಿಲ್ಲವೆಂದರೆ.

ಆ ಎರಡನೆಯ ಘಟನೆಯಿಂದಲೆ ತನ್ನ ಮನಸ್ಸು ಚಲ-ವಿಚಲವಾಗಿತ್ತು: ತನಗೆ ಹೆದರಿಕೆಯೂ ಎನ್ನಿಸಿತ್ತು. ಇದೇನೊ ಒಂದು ಮೋಸ ಇಲ್ಲವೆ ಭೂತಾಟಿಕೆಯಾಗಿರಬಹುದೆ – ಎಂಬುದು ತನ್ನ ಹೆದರಿಕೆ. ಮುಂಚೆ, ರಾಮಣ್ಣನ ರಾತ್ರಿಯೂಟದ ಬಗ್ಗೆ ಹಾಗೆ ನಡೆದುಹೋದ ಸಂಗತಿಯ ಬಗ್ಗೆ ತನಗೆ ಆಶ್ಚರ್ಯವಾಗಿದ್ದರೂ ತಾನು ಅದನ್ನು ಕೆಲ ದಿನಗಳಲ್ಲಿ ಮರೆತು ಬಿಟ್ಟಿದ್ದಳು. ಅಕ್ಕ – ರಾಮಣ್ಣ ಇಬ್ಬರಿಗೂ ಆಶ್ಚರ್ಯವಾಗಿತ್ತಾದರೂ ಅವರೂ ಅದನ್ನು ಮರೆತರು. ಮುಂಚೆ ಕೆಲದಿನ "ಇಂದಿನ ಭವಿಷ್ಯ ಏನು ?" ಎಂದು ತನ್ನನ್ನು ನಗೆಯಿಂದ ಪೀಡಿಸಿದರು, ಕ್ರಮೇಣ ಎಲ್ಲವೂ ಮೊದಲಿನಂತೆಯೆ ಸಾಗಿತ್ತು.

ಒಂದು ದಿನ ಇಳಿಹೊತ್ತಿನ ಸಮಯ. ತಾನು ಅಕ್ಕನೊಡನೆ ಮಾತನಾಡುತ್ತ ಕುಳಿತಿದ್ದಾಳೆ. ರಾಮಣ್ಣ ಯಾವುದೊ ಒಂದು ಪುಸ್ತಕವನ್ನು ತರಲು ಅವಸರದಿಂದ ಹೊರಬಿದ್ದಿದ್ದಾನೆ. "ಈಗ ಬರ್ತೀನಿ ನಾನು. ಒಂದು ವಿಷಯದಿಂದ ತಡೆದು ನಿಂತಿದೆ, ಸಂದರ್ಭ ನೋಡಿಕೊಳ್ಳೋಕಂದ್ರೆ ಪುಸ್ತಕಾನೇ ಇಲ್ಲ. ಅದನ್ನ ತಕ್ಕೊಂಡವನೆ ಬಂದ್ಬಿಡ್ತೀನಿ" ಎಂದು ಲಗಬಗೆಯಿಂದ ಹೊರಬಿದ್ದಿದ್ದ.

ನಾಲ್ಕೈದು ನಿಮಿಷ ತಾನು ಅಕ್ಕನೊಡನೆ ಮಾತಾಡಿ ತಟ್ಟನೆ ಎದ್ದಿದ್ದಳು. ಎದ್ದವಳೆ "ಅಯ್ಯಯ್ಯ!" ಎಂದು ನೋವಾದವಳಂತೆ ಬಲಗಾಲನ್ನು ಹಿಡಿದುಕೊಂಡಿದ್ದಳು.

"ಯಾಕ ? ಏನಾಯ್ತು ಕಾಲಿಗೆ ?"

"ಎಡವಿ ಬಿದ್ದೆ."

"ಏನಂದಿ ?" ಎಂಬ ಅಕ್ಕನ ಮಾತಿಗೆ ತನಗೆ ಎಚ್ಚರ ಬಂದಂತಾಗಿತ್ತು. ಪೆಚ್ಚು ಕಳೆಯಿಂದ ಅಕ್ಕನನ್ನು ನೋಡುತ್ತ ನಿಂತಳು.

"ಹಗಲುಗನಸು ಕಾಣ್ತಿದ್ದಿಯೆ ಏನೆ, ಕುಮುದಾ ?" ಎಂದು ಅಕ್ಕ ನಗುತ್ತಲೆ ಕೇಳಿದ್ದಳು.

"ಇಲ್ಲ, ಅಕ್ಕ. ಖರೇನೇ ಏನೊ ಎಡವಿ ಬಿದ್ದು ಕಾಲಿಗೆ ಪೆಟ್ಟು ತಾಕಿ

ಬಹಳ ನೋವಾಧಾಂಗಾಯ್ತು ಒಮ್ಮೆಲೆ" ಎಂದು ಕಾಲನ್ನು ಹಿಡಿದು ಕೊಂಡು ಹೇಳುವಾಗ ಪೆಟ್ಟೂ ತಾಕಿರಲಿಲ್ಲ, ನೋವೂ ಆಗಿರಲಿಲ್ಲ ಎಂಬುದು ತನ್ನಂತೆ ಅಕ್ಕನಿಗೂ ಸ್ಪಷ್ಟವಾಗಿದ್ದಿತು.

"ಆಯ್ತು. ಈ ಬ್ಯಾನಿಗೆ ನಿನ್ಗ ಬ್ಯಾಗ ಔಷಧಾ ಕೊಡಿಸ್ಬೇಕು" ಎಂದು ಅಕ್ಕ ನಗುತ್ತಿರುವಾಗಲೆ ಯಾರೊ "ಬಾಗಿಲಾ ತಗೀರಿ" ಎಂದಿದ್ದರು.

ಬಾಗಿಲನು ತೆರೆದಾಗ ರಾಮಣ್ಣ, ಇನ್ನೊಬ್ಬರ ಹೆಗಲ ಮೇಲೆ ಕಯ್ಯ ನ್ನೂರಿ ನಿಂತಿದ್ದ. ಅವಸರದಿಂದ ಹೋಗುವಾಗ ಎಡವಿ ಬಿದ್ದು ಬಲಗಾಲಿಗೇ ಪೆಟ್ಟನ್ನು ತಾಕಿಸಿಕೊಂಡು ಬಂದಿದ್ದ !

ಅಂದಿನಿಂದ ಕುಮುದಳಿಗೆ ಪೂರ್ತಿ ಭರವಸೆಯಾಗಿತ್ತು. ಯಾಕೆ ಹೀಗಾಗುವುದು ಎಂಬುದು ತಿಳಿಯದಿದ್ದರೂ ರಾಮಣ್ಣನನ್ನು ಕುರಿತು ತನಗಾಗುವ ಇಂತಹ ಅನುಭವಗಳಿಂದ ತಾನು ಪೂರ್ತಿಯಾಗಿ ರಾಮಣ್ಣನಿಗೆ ಮನಸೋತವಳು ಎಂಬ ಭರವಸೆ ಅನಿವಾರ್ಯವಾಗಿತ್ತು.

ಎಷ್ಟೋ ಸಲ ವಿಚಾರಮಾಡಿದ್ದಳು. ಪ್ರೇಮವೆಂದರೆ ಹೀಗಿರುವುದೆ? ಪ್ರೀತಿಸುವ ವಸ್ತುವಿನ ಬಗ್ಗೆ ಇಷ್ಟು ಆತ್ಮೀಯತೆ ಬರುವುದೆ?

ತನ್ನದಂತೂ ಆ ಅವಸ್ಥೆಯಾಗಿತ್ತು. ಹೊಟ್ಟೆಯೊಳಗಿನ ಕೂಸು ರೂಪುಗೊಳ್ಳುವುದಕ್ಕೆ ತಾನು ಈಪರಿ ಯೋಗವನ್ನು ಆಚರಿಸಬೇಕಾಗಿತ್ತು. ತಾಯ್ತನ ಎಂದರೆ ಕಾಮತೃಪ್ತಿಗೆ ಶಿಕ್ಷೆ ಅಲ್ಲ, ಸಂಭೋಗಮದದ ಆಯಾಸ ಫಲವಲ್ಲ, ಗಂಡುಹೆಣ್ಣಿನ ಕೂಟದ ಕುಪರಿಣಾಮವಲ್ಲ, ಯಾವ ವಾಸ್ತವಿಕ ಕಾರಣದಿಂದ ಹುಟ್ಟಿದ ಕಾರ್ಯವಲ್ಲ, ಎರಡು ಹೃದಯಗಳು ಒಂದಾದುದರ ಬಾಹ್ಯಸಂಕೇತ – ಎಂಬ ಭಾವನೆ, ಆಕೆ ಬುದ್ಧಿಶಕ್ತಿಗೆ ಮೀರಿದ್ದರಿಂದ, ಅಸ್ಪಷ್ಟರೂಪದಲ್ಲಿ ಮೂಡಿತ್ತು. ಆ ತಾಯ್ತನದ ಪ್ರಭಾವದಿಂದಲೆ ಅಂದು ತಾನು ಒಪ್ಪಿಕೊಂಡಿದ್ದಳು, ಹೆರಿಗೆಯಾದೊಡನೆ ಮತ್ತೆ ರಾಮಣ್ಣನೊಡನೆ ಇದ್ದುಕೊಳ್ಳಲು. ಆದರೂ ಹಟದಿಂದ ಕರಾರನ್ನು ಹಾಕಿದ್ದಳು, ದಾಂಪತ್ಯ ಜೀವನವನ್ನು ಮಾತ್ರ ನಡೆಸುವಂತಿಲ್ಲ ಎಂದು.

ಆದರೂ ಒಪ್ಪಬಾರದಾಗಿತ್ತೇನೊ ಎಂದೆನ್ನಿಸುತ್ತಿತ್ತು ಆಗಾಗ. ಮುಂದೆ ಆ ಸೀರೆಯ ಸಂದರ್ಭದಲ್ಲಂತೂ "ಒಪ್ಪಿದ್ದು ತಪ್ಪು" ಎನ್ನಿಸಿತ್ತು.

"ನಾನು ಒಪ್ಪಬಾರದಾಗಿತ್ತು" ಎಂದಳು. ತಟ್ಟನೆ ಸುತ್ತಲೂ

ನೋಡಿದಳು. ಏನೊ ಮಾತನಾಡಿದೆನಲ್ಲ ನಾನು ? ಒಪ್ಪಬಾರದಾಗಿತ್ತು ಎಂದೆನಲ್ಲ ? ಕೈಗಡಿಯಾರವನ್ನು ನೋಡಿಕೊಂಡಳು, ಸ್ಮರಣೆಗೆ ಬಂದಿತು. ಇಂದು ಇವರ ಕೂಡ ಇವರ ಸತ್ಕಾರಸಭೆಗೆ ಹೋಗಲು ಒಪ್ಪಬಾರದಾಗಿತ್ತು ಎಂಬ ವಿಚಾರವಾಗಿ ತನ್ನ ಬಾಯಿಯಿಂದ ಹಾಗೆ ಬಂದಿತೇನೊ ಎಂದು ಸಮಾಧಾನವನ್ನು ತಂದುಕೊಂಡು ಎದ್ದಳು. "ಈ ಹುಡುಗನ ಸ್ವಭಾವ ನನಗ್ಗೊತ್ತು. ಆಡ್ಲಿಕ್ಕೆ ಹೋದರ ಯಾವುದರ ಪರಿವೀನೇ ಇರೋದಿಲ್ಲ. ಎಷ್ಟು ಸರಿ ಹೇಳಿದ್ದೆ, ಈವೊತ್ತು ಸಭಾಕ್ಕ ಹೋಗ್ಬೇಕಾಗೇದ, ಬ್ಯಾಗ ಮನೀಗೆ ಬಾ" ಅಂತ. ಇನ್ನೂ ಸುಳಿವಿಲ್ಲ. ಇವ ಬರೋದು ಯಾವಾಗ, ಇವನ ತಯಾರಿ ಆಗೋದ ಯಾವಾಗ ? ಎಂದು ಮತ್ತೊಮ್ಮೆ ಗಡಿಯಾರ ವನ್ನು ನೋಡಿಕೊಂಡಳು. "ಅಯ್ಯ ! ಇನ್ನು ಅರ್ಧ ಗಂಟೇನೆ ಉಳೀತಲ್ಲ ಹೊರಡಲಿಕ್ಕೆ ?" ಎಂದು ಚಡಪಡಿಸುತ್ತ ಬಾಗಿಲಿಗೆ ಬಂದು ಮೋಹನನನ್ನು ಪ್ರತೀಕ್ಷಿಸುತ್ತ ನಿಂತಳು.

೮

"ಇನ್ನೂ ಅರ್ಧ ಗಂಟೆ ! ಅಬ್ಬ ! ಹೊತ್ತೇ ಸರೀವಲ್ಲದು" ಎಂದ ರಾಮಣ್ಣ ಕೈಗಡಿಯಾರವನ್ನು ನೋಡಿಕೊಂಡು. ಛಿ ! ಎಂತಹ ಹುಚ್ಚ ನಾನು ! ವರ್ಷಾನುವರ್ಷಗಳ ಸ್ಮೃತಿಪಥವನ್ನು ದಾಟುವಾಗಲೂ ಹೊತ್ತೇ ಸರಿಯಲೊಲ್ಲದು – ಎನ್ನುತ್ತಿದ್ದೇನೆ ! ಹೋಗಲಿ – ಇಂದಿನ ಸತ್ಕಾರಸಭೆ ಯಂತೂ ಸ್ಮೃತಿಯ ವಿಷಯ ಅಲ್ಲವಲ್ಲ. ಅದಕ್ಕಾಗಿ ತಾನು ದಾರಿ ಕಾಯುತ್ತಿರುವುದು. ತಾನು ಲೇಖಕ ಎಂಬುದಕ್ಕಾಗಿ ಸಾರ್ವಜನಿಕ ಸತ್ಕಾರ ತನಗೆ. ವಯಸ್ಸು 45. ನಿಜವಾಗಿ ಅಭಿಮಾನ ಪಡುವಂತಹ ಮಾತು. ಪ್ರಜಾಪ್ರಭುತ್ವದ ಈ ಕಾಲದಲ್ಲಿ ಪ್ರಜೆಗಳೆ ತನ್ನನ್ನು ಸತ್ಕರಿಸು ತ್ತಿದ್ದಾರೆ. ನಿಜವಾಗಿಯೂ ಹೆಮ್ಮೆಯ ವಿಷಯ. ಆದರೂ ಆ ಬಗ್ಗೆ ತನಗೆ ಯಾವ ಉತ್ಸಾಹವೂ ಇಲ್ಲವಲ್ಲ ? ಯಾಕೆ ? ಯಾಕೇನು ? ಇಡಿಯ ಪ್ರಪಂಚವೇ ಮೋಸ—ಕ್ಷಮಿಸಬೇಕು, ಅದು ಸೌಜನ್ಯವಲ್ಲವೇನೊ ? — ಇಡಿಯ ಪ್ರಪಂಚವೇ ಮಾಯೆ. ಹಾಂ ! ಮೋಸ ಎಂದರೆ ಒರಟುತನ,

ಮಾಯೆ ಎಂದರೆ ತತ್ತ್ವಜ್ಞಾನ. ಇಲ್ಲಿದೆ ಸಾಹಿತ್ಯದ ಶಕ್ತಿ. ಆದರೂ ಮನೆಯಲ್ಲಿ ವಿಚಾರ ಮಾಡುವಾಗ 'ಮೋಸ' ಎಂಬ ಹೆಚ್ಚು ಸಮರ್ಪಕವಾದ ಶಬ್ದವನ್ನೆ ಬಳಸಬಹುದಲ್ಲ? ಮೋಸ, ತನ್ನ ಸಾಹಿತ್ಯಸೇವೆ ಮೋಸ, ಇಂದಿನ ಸಾರ್ವಜನಿಕ ಸತ್ಕಾರ ಮೋಸ. ತನ್ನ ಸಾಹಿತ್ಯ ಎಂತಹುದು? ಈಗ ತಾನು ನಡೆಸಿರುವನಲ್ಲ? ಇಂತಹ ವಿಚಾರಗಳನ್ನು ಬರೆದಿರುವನೆ ತಾನು? ಇಷ್ಟು ದಿನ ಅನುಭವಿಸಿದನಲ್ಲ? ಅದನ್ನು ಎಲ್ಲಿಯಾದರೂ ವರ್ಣಿಸಿರುವನೆ ತಾನು? ಪ್ರೇಮದ ಹೆಂಡತಿ – ಒಬ್ಬಾಕೆ, ಘಟಂಗತನದ ಹೆಂಡತಿ ಒಬ್ಬಾಕೆ. ಆ ಕತೆಯನ್ನು ಹೇಳಿರುವನೆ ತಾನು? ಹೇಳಲು ಭಾಷೆ ಇಲ್ಲ, ತಂತ್ರವಿಲ್ಲ, ಔಚಿತ್ಯವಲ್ಲ, ಹೇಳಿದರೆ ಕೇಳುವವರು ತಿಳಿದುಕೊಳ್ಳುವರೆ?

ಹುಚ್ಚ! ಹುಚ್ಚ! ಜನರು ತಿಳಿದುಕೊಳ್ಳುವರು ಎಂಬ ಆತ್ಮವಿಶ್ವಾಸದಿಂದ ಇಷ್ಟು ವರ್ಷಗಳ ವರೆಗೆ 'ನಿನ್ನದ ಆದ ಶೈಲಿಯಲ್ಲಿ ವಿಚಾರಪರಿಪ್ಲುತ, ವಿಚಾರ ಪ್ರಚೋದಕ' ಭಾಷಣಗಳನ್ನು ಎಷ್ಟು ಮಾಡಿರುವೆ ಗೊತ್ತಿದೆಯೆ? ಸಾಹಿತ್ಯಕೃತಿಗಳನ್ನು ಎಷ್ಟು ಬರೆದೆ? ಸಮಾಜ ಪ್ರಗತಿಹೊಂದಿದೆಯೆ ನಿನ್ನ "ಸೇವೆ"ಗಾಗಿ?

ಮೋಸ! ಇಡಿಯ ಪ್ರಪಂಚವೆ ಮೋಸ. ನಿಜವಿದ್ದುದೆಂದರೆ ಒಂದೇ – ನಮ್ಮ ಪಾಶವೀವೃತ್ತಿಯ ಜೀವನ. ಭರ್ತೃಹರಿಯು ಹೇಳುವಂತೆ, ಆಹಾರ, ನಿದ್ರಾ, ಭಯ, ಮೈಥುನ–ಇದಿಷ್ಟೆ ನಿಜವಾದ ಜೀವನ. ಮನುಷ್ಯನ ಸಹಜ ಜೀವನವೆಂದರೆ ಈ ವೃತ್ತಿಗಳಲ್ಲಿಯೆ. ಮಿಕ್ಕದೆಲ್ಲ ಕೃತಕ, ಮೋಸ; ಕೆಲ ಕಾಲ ಈ ವೃತ್ತಿಗಳನ್ನು ಹತ್ತಿಕ್ಕಿ ನಮ್ಮನ್ನು ನಾವೇ "ಸುಸಂಸ್ಕೃತ" ಎಂದುಕೊಳ್ಳುವೆವು; ಒಂದು ದಿನ ಒತ್ತಡ ತಡೆಯದಂತಾಗಿ ಯುದ್ಧ, ವ್ಯಭಿಚಾರ, ಸುಲಿಗೆಗಳಿಂದ ಹಿಂದಿನ ಎಲ್ಲ ನಿಗ್ರಹವನ್ನೂ ತೃಪ್ತಿಗೊಳಿಸಿಕೊಳ್ಳುತ್ತೇವೆ; ಆಗ ಕ್ಷಣಕಾಲ ನಾಚಿಕೆ; ಮುಖಕ್ಕೆ ಮುಖ ಇದಿರಾಗದೆ, ಬೆನ್ನಿಗೆ ಬೆನ್ನನ್ನು ತಗುಲಿಸಿ ಬಾಳುವೆವು, "ಸುಸಂಸ್ಕೃತ"ರಾಗುವೆವು; ಆಮೇಲೆ ಮತ್ತೆ—ಆಮೇಲೆ ಮತ್ತೆ—

ನೀಚೈರ್ಗಚ್ಛತ್ಯುಪರಿ ಚ ದಶಾ ಚಕ್ರನೇಮಿಕ್ರಮೇಣ.

ಇಂದಿನ ಸಭೆಯಲ್ಲಿ ಇದೇ ವಿಷಯದ ಬಗ್ಗೆ ಮಾತನಾಡಿದರೆ? ಓ– ಮಾನಪತ್ರ ಸಮರ್ಪಣೆ ಒಂದಿದೆಯಲ್ಲವೆ? ವಿಧಿಯು ಕ್ರೂರ ಎನ್ನುವುದು ಇದಕ್ಕಾಗಿ. ನನ್ನ ಸಾಹಿತ್ಯಸೇವೆಯನ್ನಷ್ಟೆ ಅಲ್ಲ, ನನ್ನ ಆದರ್ಶದಾಂಪತ್ಯ ವನ್ನೂ ಹೊಗಳಿದ್ದಾರೆ ಮಾನಪತ್ರದಲ್ಲಿ!

ಎಂತಹ ಆದರ್ಶ! ಹತ್ತು ವರುಷಗಳಾದುವು "ದಾಂಪತ್ಯ" ಎಂಬು ದನ್ನರಿಯದೆ, ಹತ್ತು ವರ್ಷಗಳಾದುವು ಸಂಸಾರದ ನಾಟಕವನ್ನು ನಡೆಯಿಸಿ.

ಆದರೂ ಇಂದಿನ ಸಭೆಗೆ ನನ್ನೊಡನೆ ಬರಲು ಕುಮುದಳು ಒಪ್ಪಿದ ಳಲ್ಲ! ಆಶ್ಚರ್ಯ! ಹಿಂದೊಮ್ಮೆ ಹೀಗೆಯೆ ಒಪ್ಪಿದ್ದಳು ಆಶ್ಚರ್ಯವಾಗುವಂತೆ, ಮೋಹನನ ಹೆಂಗೆಯಾದ ಮೇಲೆ ಮನೆಗೆ ಬಂದು ಇದ್ದುಕೊಂಡಿದ್ದಳು. ಹಾಂ .... ಈಗ ಸ್ಮರಣೆಗೆ ಬಂದಿತು, ಸೀರೆಯ ಸಂದರ್ಭ ನಡೆದದ್ದು ಆ ತರುವಾಯ, ಮೋಹನನ ಮೊದಲ ಹುಟ್ಟಿದ ಹಬ್ಬದ ದಿನ. ಆ ದಿನವೂ ಹೊರಟುಹೋಗಿದ್ದಳಲ್ಲ? ನನ್ನೊಡನೆ ಇರುವುದಕ್ಕೆ ಆಕೆಯು ಒಪ್ಪಿದರೂ ಕರಾರಿ ನಂತೆ ತಾನು ಬ್ರಹ್ಮಚಾರಿಯಾಗಿ ವರ್ತಿಸಿದ್ದರೂ ಹೊರಟು ಹೋಗಿದ್ದಳು. ಇಂದೂ ಹಾಗೆಯೆ ಮಾಡಿದರೆ? ಸತ್ಕಾರಸಭೆಯವರು ಕರೆಯಲು ಬರುವ ಷ್ಟರಲ್ಲಿ ಹೊರಟುಹೋದರೆ?

ರಾಮಣ್ಣನಿಗೆ ಗಾಬರಿಯಾದಂತಾಯಿತು. ಮೆಲ್ಲಗೆ ಕೆಳಗಿಳಿಯುವ ಪಾವಟಿಗೆ ಹತ್ತಿರ ಹೋಗಿ ನಿಂತುಕೊಂಡ. ಕೆಳಗಿನ್ನೂ ಕುಮುದಳ ಸದ್ದು ಇದೆ!

ಛಿ! ಎಂತಹ ಅಧೀರವೃತ್ತಿಯವನಾಗಿದ್ದಾನೆ ತಾನು! .... ಓ – ಇನ್ನೊಂದು ವಿಚಾರ. ಮೋಹನನು ಮನೆಯಲ್ಲಿಲ್ಲ, ಅವನನ್ನು ಬಿಟ್ಟು ಆಕೆ ಹೋಗಲಾರಳು.

ಮೋಹನನನ್ನು ಬಿಟ್ಟು ತಾನೂ ಇರಲಾರ, ಮೋಹನನನ್ನು ಬಿಟ್ಟು ಕುಮುದಳೂ ಇರಲಾರಳು; ಆದ್ದರಿಂದ ತಾನು–ಕುಮುದ ಒಬ್ಬರನ್ನೊಬ್ಬರು ಬಿಟ್ಟು ಇರಲಾರರು.

ಭಲೆ! ಇದೊಳ್ಳೆ ಲೆಕ್ಕ—ಎನ್ನುತ್ತ ಮತ್ತೆ ಮೇಲೆ ನಡೆದನು.

ಒಂದೇ ವಸ್ತುವಿಗೆ ಸಮವಾದ ಎರಡು ವಸ್ತುಗಳು ಪರಸ್ಪರ ಸಮವಾಗಿರುವುವು.

ಒಂದೇ ಜೀವಕ್ಕೆ ಅಂಟಿಕೊಂಡ ಎರಡು ಜೀವಗಳು ಪರಸ್ಪರ ಅಂಟಿಕೊಂಡಿರಬೇಕಲ್ಲವೆ ?

ಭವಭೂತಿಯೂ ಹೇಳಿದ್ದಾನೆ, "ಆನಂದಗ್ರಂಥಿರೇಕೋಯಂ ಅಪತ್ಯಮಿತಿ ಬಧ್ಯತೇ" ಎಂದು ; ಗಂಡ-ಹೆಂಡಿರನ್ನು ಒಂದುಗೂಡಿಸುವ ಗಂಟು ಮಗು ಎಂದರೆ.

ಮೋಹನನನ್ನು ಕರೆದುಕೊಂಡು ಸೋದರತ್ತೆಯ ಮನೆಯಿಂದ ಮೊದಲ ಸಲ ಕುಮುದಳು ಬಂದಾಗ ತಾನೂ ಹಾಗೆಯೆ ತಿಳಿದಿದ್ದನು. ಅವನ ಬಗ್ಗೆ ತನ್ನೊಡನೆ ಮಾತುಗಳನ್ನಾಡುವಳು, ಸೋದರತ್ತೆಯ ಮನೆಯಲ್ಲಿಯ ಅವನ ಲೀಲೆಗಳನ್ನು ವರ್ಣಿಸುವಳು, ತಾನು ಮಗುವನ್ನಾಡಿಸುತ್ತಿದ್ದಾಗ ಹೆಮ್ಮೆ-ಸಂತೋಷಗಳಿಂದ ತನ್ನನ್ನು ನೋಡುವಳು ; ಕ್ರಮೇಣ, ತನಗೆನ್ನಿಸಿತ್ತು ತಮ್ಮ - ತಮ್ಮೊಳಗಿನ ವೈಮನಸ್ಯ ದೂರಾಗಿ ತಾನೂ ಕುಮುದಳೂ - ತಾನೂ ಕುಮುದಳೂ—ಏನು ?

ಪ್ರೇಮದ ಸಂಸಾರವನ್ನು ನಡೆಯಿಸಬಹುದೆಂದೆ ? ಅಲ್ಲ - ಆ ರೀತಿ ತನಗೆ ವಿಚಾರವೆ ಬರುತ್ತಿರಲಿಲ್ಲ. ತಾನೂ ಕುಮುದಳೂ ಮೊದಲಿನಂತೆ ಇರಬಹುದು ಎಂಬ ಆಶೆ ಹುಟ್ಟಿತ್ತು. ಮೊದಲಿನಂತೆ ಯಾಕೆ ಇರಬಾರದು ಎಂದು - ಒಮ್ಮೆ ಧೈರ್ಯವನ್ನು ತಂದುಕೊಂಡು ಆಕೆಯನ್ನು ಕೇಳಿಯೂ ಬಿಟ್ಟಿದ್ದ !

"ಮೊದಲಿನ್ಹಾಂಗಂದ್ರ ?" ಎಂದು ಕುಮುದ ಮರುಸವಾಲನ್ನು ಹಾಕಿದ್ದಳು.

"ಅಲ್ಲ-ಅಂದ್ರ-ಸುಮ್ಮನೆ ಹೀಂಗ ಇರೋದಕಿಂತ—ಅಂತಂದೆ."

"ಹೀಂಗಂದ್ರ ?"

"ಅಲ್ಲ - ಯಾವುದು ಇದು ಇಲ್ದೆ - ಅಂದ್ರ—"

"ಈಗೇನು ಕಡಿಮೆ ಬಿದ್ದದ ನಿಮಗ ?

"ಕಡಿಮೆ ಅಂತಲ್ಲ. ಅಂದ್ರ - ಖರೇ ಅಂದ್ರ—ಒಂದೇ ಮನೀವಳಗ ಇದ್ದೂ - ಯಾಕ—"

"ಬೇಕಾದ್ರ ಒಂದೇ ಮನೀವಳಗ ಇರೋದು ಬ್ಯಾಡ"

"ಛೆ ! ಛೆ ! ಹಾಗನ್ನಲಿಲ್ಲ ನಾನು—"

"ಮತ್ತ ಹ್ಯಾಗಂದ್ರಿ ?"

ಹೇಗೆ ಅನ್ನುತ್ತಿದ್ದನೊ, ಏನು ಅನ್ನುತ್ತಿದ್ದನೊ ! ಆದರೆ ಆ ಪ್ರಸಂಗವೆ ಬಂದಿರಲಿಲ್ಲ. ಇಷ್ಟೆಲ್ಲ ಮಾತ ನಡೆವಾಗ ಕುಮುದಳ ಬಗಲಲ್ಲಿದ್ದ ಕೂಸು –ಮೋಹನ–ಒಂದೇ ಸವನೆ ತನ್ನ ಕಡೆ ಬರಲು ಯತ್ನಿಸುತ್ತಿದ್ದ, ಕುಮುದಳು ಅಭ್ಯಾಸಬಲದಿಂದಲೆ ಎನ್ನುವಂತೆ ಮಗುವನ್ನು ಗಟ್ಟಿಯಾಗಿ ಹಿಡಿದು ಕೂಡ್ರಿಸಿ ಕೊಳ್ಳ ಯತ್ನಿಸುತ್ತಿದ್ದಳು, ಮಗುವಿನ ಹಟ ಹೆಚ್ಚಾಗಿತ್ತು, ಕುಮುದಳು ತುಸು ಬಲದಿಂದಲೆ ಮಗುವನ್ನು ತಡೆದಿದ್ದಳೊ ಏನೊ – ಮಗು ಮುಂದೆ ಕೈಮಾಡಿ ಅಳುವುದರ ಸೂಚನೆಯನ್ನು ಕೊಟ್ಟಿತ್ತು. ರಾಮಣ್ಣನ ಜೀವ ಉಳಿದಂತಾಗಿತ್ತು. ಇದುವರೆಗಿನ ಸಂವಾದ, ಸಂಭಾಷಣೆ ಯಾವ ರೀತಿ ಯಿಂದಲೂ ತಾನು ಬಯಸಿದಂತೆ ನಾಗಿರಲಿಲ್ಲ. ಹೇಳಬೇಕೆಂದು ಹಟ-ದಿಂದ ನೆನೆದಿಟ್ಟುಕೊಂಡ ಮಾತುಗಳೆಲ್ಲ ಸರ್ವನಾಮಗಳಾಗಿಬಿಟ್ಟಿದ್ದುವು. ಚರ್ಚೆಯನ್ನು ಮುಂದೆ ಹೇಗೆ ನಾಗಿಸಬೇಕೆಂಬುದೆ ತಿಳಿಯದಾಗಿತ್ತು. ಹೀಗಾಗಿ ಮುಂದೆ ಕೈಮಾಡಿ ತನ್ನ ಕಡೆ ಬರಬೇಕೆನ್ನುವ ಮಗು ವಿಪತ್ತಿ-ನಿಂದ ತನ್ನನ್ನು ಪಾರುಗಾಣಿಸಲು ಇಳಿದುಬಂದ ಪರಮಾತ್ಮನ ಅವತಾರ ಎನ್ನುವಂತೆ ಕಂಡಿತು. ಶ್ರದ್ಧಾವಂತ ಭಕ್ತನಂತೆ ತಾನೂ ಮುಂದೆ ಕೈ ಮಾಡಿದ್ದ ಕೂಸನ್ನು ಎತ್ತಿಕೊಳ್ಳಲು. ಚಿಕ್ಕಮಕ್ಕಳಿಗೆ ಅದೆಲ್ಲಿಂದ ಬರುವುದೊ ಕಿಡಿಗೇಡಿತನದ ಬುದ್ಧಿ ? ಇದುವರೆಗೆ ತನ್ನ ಕಡೆ ಬರಲು ಹಟ ಮಾಡುವ ಮಗು, ತಾನು ಕೈಮುಂದೆ ಮಾಡಿದೊಡನೆ ಕುಳಿತಲ್ಲಿಯೆ ತಾಯಿಯನ್ನು ಎರಡೂ ಕೈಗಳಿಂದ ಗಟ್ಟಿಯಾಗಿ ಹಿಡಿದುಕೊಂಡಿತ್ತು. ಅದು ಹಾಗೆ ಮಾಡೀತೆಂಬ ಕಲ್ಪನೆಯಿಲ್ಲದೆ ಅದನ್ನು ಎತ್ತಿಕೊಳ್ಳಲು ಹೋದ ತನ್ನ ಕೈಗಳು ಮಗುವಿನ ಕೈಯನ್ನು ತಾಯಿಯಿಂದ ಬಿಡಿಸಿಕೊಳ್ಳುವಾಗ —

ನೆನಪಿಗಾಗಿ ಈಗಲೂ ಮೈ ನಡುಗಿತು. ರಾಮಣ್ಣನು ಆ ಪರಿ ವಿದ್ಯುತ್ಸಂಚಾರದ ಸುಖವನ್ನು ಅವನೆಂದಿಗೂ ಅನುಭವಿಸಿರಲಿಲ್ಲ. ಒಂದು ಕ್ಷಣ, ಅಲ್ಲ ಒಂದು ಹತ್ತರಷ್ಟು–ಅಲ್ಲ–ನೂರರಷ್ಟು, ಕಣ್ಣೆವೆ ಬಡೆಯುವಷ್ಟು ಅಲ್ಪಕಾಲದಲ್ಲಿ ತನ್ನ ಮೈಯಲ್ಲಿ, ಕುಮುದಳ ಮೈಯಲ್ಲಿ, ತನ್ನಿಂದ ಅವಳಲ್ಲಿ, ಅವಳಿಂದ

ತನ್ನಲ್ಲಿ ಬರೀ ವಿದ್ಯುತ್ಸಂಚಾರವಷ್ಟೆ ಅಲ್ಲ, ಆ ಅನುಭವದ ಬಗ್ಗೆ ಒಬ್ಬರಿಂದೊಬ್ಬರಿಗೆ ಸಂದೇಶ, ಆ ಸಂದೇಶಕ್ಕೆ ಒಬ್ಬರಿಂದೊಬ್ಬರಿಗೆ ಉತ್ತರ ಆ ಉತ್ತರಕ್ಕೆ ಒಬ್ಬರೊಬ್ಬರ ಒಪ್ಪಿಗೆ—ಇದಿಷ್ಟೂ ಅಲ್ಲದೆ ಇನ್ನೂ ಏನೇನೊ ನಡೆದು ಹೋಗಿರಬೇಕು. ಅಷ್ಟು ಅವಧಿ ತಾವಿಬ್ಬರೂ ಗೊಂಬೆಗಳಂತೆ ನಿಂತುಕೊಂಡಂತಿದ್ದಿತು.

ಎಷ್ಟು ಯುಗಗಳ, ಎಷ್ಟು ಜನ್ಮಗಳ ಅನುಭವ ಆ ಕ್ಷಣಾಂಶದಲ್ಲಿ ಮಿಂಚಿಹೋಗಿತ್ತೊ! ಎರಡು ಜೀವಗಳು ಸೃಷ್ಟಿ ತಮಗೊಪ್ಪಿದ ಕರ್ತವ್ಯದ ಹೊಣೆಯನ್ನು, ಆಳವನ್ನು, ಅರಿವನ್ನು ಆ ಕ್ಷಣಾಂಶದಲ್ಲಿ ಅನುಭವಿಸಿದ್ದುವು. ಎರಡು ದೇಹಗಳು ಅಕಸ್ಮಾತ್ತಾಗಿ ಒಂದನ್ನೊಂದು ಹೊಂದಿ ಎರಡೂ ಇಲ್ಲ ದಂತಾಗಿದ್ದುವು.

ರಾಮಣ್ಣ ನಕ್ಕ, ಅತ್ಯಂತ ನಿರಾಶೆಯಿಂದ—ಅಂದಿನ ನೆನಪಿಗಾಗಿ, ಆ ಬಗ್ಗೆ ಇಂದಿನ ತನ್ನ ವಿಚಾರಗಳಿಗಾಗಿ. ಎರಡು ದೇಹಗಳು ಇಲ್ಲವಾಗಿದ್ದುವೆಂದು ತನ್ನ ಸಾಹಿತ್ಯಶಕ್ತಿಯು ಕಲ್ಪನೆಯಿಂದ ಹೇಳಲಿ, ನಿಜವಾಗಿ ನಡೆದದ್ದು ಒಂದೇ ದೇಹ ಇಲ್ಲದಂತಾಗಿತ್ತು. ತನಗೆ ಎಚ್ಚರವಾಯಿತೆನ್ನುವಷ್ಟರಲ್ಲಿ ಕುಮುದ ಅಲ್ಲಿ ನಿಂತಿರಲಿಲ್ಲ.

ಆದರೂ ರಾಮಣ್ಣನಿಗೆ ಆನಂದವೆ ಎನ್ನಿಸಿತು. ಆ ಒಂದು ಕ್ಷಣದ ಅನುಭವದಲ್ಲಿ ಹಿಂದಿನ ಅನೇಕ ತಿಂಗಳುಗಳ ಮಾನಸಿಕ ಯಾತನೆಯನ್ನು ಮರೆತುಬಿಟ್ಟಿದ್ದನು, ಅಲ್ಲ – ಕಳೆದುಕೊಂಡಿದ್ದನು. ಆಗ ಇನ್ನೊಂದು ವಿಚಾರವೂ ಹೊಳೆದಿತ್ತು. ಇಷ್ಟು ತಿಂಗಳುಗಳ ವರೆಗೆ ಕುಮುದ ಆ ರೀತಿ ಅಸಹಕಾರವನ್ನು ತೋರಿಸಿ, ಕೊನೆಗೆ ಸಹಕಾರವಿಲ್ಲದೆ ತನ್ನೊಟ್ಟಿಗೆ ಬಂದು ಇರಲು ಯಾಕೆ ಒಪ್ಪಿದ್ದಳು ಎಂಬ ವಿಚಾರವೂ ಆಗ ಅವನಿಗೆ ಹೊಳೆದಿತ್ತು.

ಮೊದಲಿನಂತೆ ಕುಮುದಳು ಅಂದಿಗೂ ತನ್ನನ್ನು ಪ್ರೀತಿಸುತ್ತಿದ್ದಳು!

ಆ ಬಗ್ಗೆ ರಾಮಣ್ಣನಿಗೆ ಸಂಶಯವೆ ಉಳಿದಿರಲಿಲ್ಲ. ಆಕೆಯ ಮೈಯನ್ನು ಸೋಂಕಿದ ಅವನ ಕೈ ಆ ಭರವಸೆಯನ್ನು ಕೊಟ್ಟಿತ್ತು. ಎಂತಹ ಚಮತ್ಕಾರ ಸೃಷ್ಟಿಯಲ್ಲಿ! ದೇಹ ಜಡ ಎಂದು ತಿಳಿಯುತ್ತೇವೆ! ಆದರೆ ಅದೇ ದೇಹ ಒಂದು ಅತ್ಯಂತ ಸೂಕ್ಷ್ಮವಾದ, ಅತ್ಯಂತ ಗಹನವಾದ ಅನುಭವವನ್ನು ಎಷ್ಟು ಸ್ವಲ್ಪದರಲ್ಲಿ ಮತ್ತು ಸುಲಭವಾಗಿ ತಿಳಿಹಿಸಿ

ಕೊಡುವುದೆಂಬುದನ್ನು ನೆನೆದರೆ ದೇಹದ ಬಗ್ಗೆ ನಮಗಿದ್ದ ತಪ್ಪು ಕಲ್ಪನೆ ದೂರಾಗಬೇಕು. ದೇಹ ನಶ್ವರವೇನೊ ನಿಜ, ಆದರೆ ಜಡವಾದುದಲ್ಲ.

ಅಂದು ತನ್ನ ಕೈಸೋಂಕಿಗೆ ಕುಮುದಳ ದೇಹ ಹೇಗೆ ತಟ್ಟನೆ ಉತ್ತರವನ್ನು ಕೊಟ್ಟಿತ್ತು ? ಕ್ರಿಯೆ-ಪ್ರತಿಕ್ರಿಯೆ ನ್ಯಾಯದಂತೆ ತನ್ನ ಕೈ ತಟ್ಟಿದೊಡನೆ ಅವಳ ದೇಹ ಬಿರುಸಾಗಿ ನೆಟಿದು ನಿಲ್ಲದೆ ಎಷ್ಟು ಮಿದುವಾಯಿತೆಂದರೆ ಇಡೀ ದೇಹವೆ ತನ್ನ ಕೈಯ ಮುಷ್ಟಿಯಲ್ಲಿ ಬರುವುದೇನೊ ಎಂದೆನ್ನಿಸಿತ್ತು. ಚಳಿಯ ಸುಖವನ್ನು ಅನುಭವಿಸುವವನು ಮುದ್ದೆಮುದ್ದೆಯಾಗಿ ಹೊದಿಕೆಯಲ್ಲಿ ಮುದುಡಿಕೊಳ್ಳುವಂತೆ ಕುಮುದಳ ಇಡಿಯ ದೇಹ ತನ್ನ ಮುಷ್ಟಿಯಲ್ಲಿ ಮುದುಡಿಕೊಳ್ಳುವುದೇನೊ ಎಂದೆನ್ನಿಸಿತ್ತು.

ಅಂದಿನ ಭರವಸೆ ರಾಮಣ್ಣನಿಗೆ ಇಂದಿಗೂ ಉಳಿದಿದೆ. ಆಕೆ ತನ್ನೊಡನೆ ಎಷ್ಟು ದೂರದಲ್ಲಿದ್ದಳು ಅಷ್ಟು ಹತ್ತಿರದಲ್ಲಿದ್ದಳು ಎಂದು ಅವನ ಭರವಸೆ. ಒಂದೆರಡು ಸಲ ಪ್ರತಿಭಟಿಸಿ ಇನ್ನಿಷ್ಟು ದೂರ ಹೋಗಬಯಸಿದ್ದರೂ ರಬ್ಬರಿನ ದಾರಕ್ಕೆ ಕಟ್ಟಿದ ಚೆಂಡಿನಂತೆ ಮತ್ತೆ ಹತ್ತಿರಕ್ಕೇ ಬಂದಿದ್ದಳು.

ಕುಮುದ ತನ್ನನ್ನು ಪ್ರೀತಿಸುತ್ತಿದ್ದಾಳೆ!

ಇಂದು ಆಕೆ ಸತ್ಕಾರಸಭೆಗೆ ಬರಲೊಪ್ಪಿದ್ದೂ ಅದಕಾಗಿಯೆ.

ಯಾರು ಹೇಳಬಲ್ಲರು ? ಇಂದಿನ ಸತ್ಕಾರದ ವೈಭವವನ್ನು ನೋಡಿ ಆಕೆಯ ಹೃದಯ ಕರಗಿದರೂ ಕರಗಬಹುದು.

ಆ ಆಶೆಯಿಂದ ರಾಮಣ್ಣ ಕೈಗಡಿಯಾರವನ್ನು ನೋಡಿಕೊಂಡ. ಧೂ ! ಇನ್ನೂ ಏನಿಲ್ಲೆಂದರೂ ಅರ್ಧಗಂಟೆ ! ಬೇಗ ಬಂದು ಬಿಡಬಾರದೆ ? ಧೂ ! ನಮ್ಮ ಜನಕ್ಕೆ ವೇಳೆಯ ನಿಯಮಿತತನವೆ ಗೊತ್ತಿಲ್ಲ, ಎಂದು ಗೊಣಗುತ್ತ ಕಿಟಕಿಯ ಕಡೆ ನಡೆದ, ಏನಾದರೂ ಕಾಣಬಹುದೆಂಬ ಆಶೆಯಿಂದ.

## ೯

ಮೋಹನನ ದಾರಿಯನ್ನು ಪ್ರತೀಕ್ಷಿಸುವ ಕುಮುದಳಿಗೆ ಒಮ್ಮೆಲೆ ಹೆದರಿಕೆಯಾದಂತಾಯಿತು. ಬೀದಿಯಲ್ಲಿ ಹೆಚ್ಚಾದ ಸುಳಿವೇ ಇದ್ದಿರಲಿಲ್ಲ. ಸಾಯಂಕಾಲವಾಗಿದೆ, ಪ್ರತಿಯೊಂದು ಪ್ರಾಣಿಯೂ ಮನೆಯ ಆಶ್ರಯವನ್ನು

ಸೇರುವ ಸಮಯ. ಮನುಷ್ಯ ಮಾತ್ರ ಎಲ್ಲ ಪ್ರಾಣಿಗಳಿಗೂ ಹೊರತಾದ ಪ್ರಾಣಿ-ಎಂಬ ವಿಚಾರ ಹೊಳೆದು ಆಕೆಯ ಮುಖದಲ್ಲಿ ಮುಗುಳ್ನಗೆ ಮೂಡಿತು. ಮನುಷ್ಯನ ನಾಗರಿಕ ಜೀವನವೆಂದರೆ ಸೃಷ್ಟಿ ನಿಯಮದ ವಿರುದ್ಧ ಜೀವನ. ಪ್ರತಿಯೊಂದು ಪ್ರಾಣಿ ಮನೆಯ ಆಶ್ರಯವನ್ನು ಸೇರ ಬೇಕೆನ್ನುವ ಈ ಸಾಯಂಕಾಲದ ಸಮಯದಲ್ಲಿ ನಾಗರಿಕನು ಮನೆಯಿಂದ ಹೊರಬೀಳುವನು ! ವಿಕ್ಷಿಪ್ತ ಪ್ರಾಣಿ. ತನ್ನ ಮೋಹನ ಇನ್ನಿಷ್ಟು ವಿಕ್ಷಿಪ್ತ.

ತಂದೆಯಂತೆ ಮಗ ! ಮನಸ್ಸಿಗೆ ಬಂದಂತೆ ನಡೆಯುವವ. ನಾನು ಬಾ ಎಂದಾಗ ಬರುವನೆ ? ಬಂದಾನು, ಕೊನೆಗೆ ಹಸಿವೆಯಾದಾಗ – ಎನ್ನುತ್ತ ಮತ್ತೆ ಒಳಕ್ಕೆ ನಡೆದಳು ಕುಮುದ.

ಹಸಿವೆಯಾದಾಗ ಬಂದಾನು–ಎನ್ನುವಾಗ ಮತ್ತೊಂದು ವಿಚಾರ ಬಂದು ಕುಮುದ ತನ್ನಷ್ಟಕ್ಕೆಯೆ ಒಳಗಿಂದೊಳಗೆ ನಕ್ಕಳು. ತಂದೆಯಂತೆ ಮಗ. ಮನಸ್ಸಿನಲ್ಲಿ ವಿಚಾರ ಬಂದಿತೆಂದರೆ ಇನ್ನೊಬ್ಬರ ಪರಿವೆ ಇಲ್ಲದೆ ಅದನ್ನು ಪೂರಯಿಸಿಕೊಳ್ಳುವ ಹಟ. ರಾಮಣ್ಣ ಹಾಗೆಯೆ.

ಎಷ್ಟು ಸುಖದ ನೆನಪುಗಳಿವೆ ತನಗೆ ! ಇಂದಿಗೂ ತಾನು ರಾಮಣ್ಣನ ಸಾನ್ನಿಧ್ಯವನ್ನು ಬಯಸುತ್ತಿದ್ದುದು ಅದಕಾಗಿಯೆ. ಎಷ್ಟು ಸಲ ನಿರ್ಣಯಕ್ಕೆ ಬಂದಿರಲಿಲ್ಲ ? ರಾಮಣ್ಣನ ಪ್ರೇಮ ತನ್ನಲ್ಲಿರುವ ಭರವಸೆ ಇಲ್ಲ; ರಾಮಣ್ಣನಿಗೆ ತನ್ನ ಬಗ್ಗೆ ಆದರವಿದ್ದ ಭರವಸೆ ಇಲ್ಲ; ರಾಮಣ್ಣನ ಮನೆಯಲ್ಲಿ, ರಾಮಣ್ಣನ ಮನದಲ್ಲಿ ತನಗಾಗಿ ಮಾನವಿದ್ದಂತೆಯೂ ಇಲ್ಲ; ತಾನೆಂದರೆ ಪಶ್ಚಾತ್ತಾಪ-ಕ್ಕಾಗಿ ಮೂರ್ತಿವೆತ್ತ ಪ್ರಾಯಶ್ಚಿತ್ತ ರಾಮಣ್ಣನ ದೃಷ್ಟಿಯಲ್ಲಿ. ಇದನ್ನೆಲ್ಲ ಅರಿತೂ ತಾನು ಇಲ್ಲಿಯೆ ಉಳಿದುಕೊಂಡಿದ್ದಾಳೆ. ಅದೊಂದು ಕಠಿಣ ತಪಸ್ಸಿನಂತಾಗಿದೆ, ರಾಮಣ್ಣನೊಡನಿದ್ದೂ ರಾಮಣ್ಣನಿಂದ ದೂರವಾಗಿರು-ವುದು. ಆದರೂ ತಾನು ಉಳಿದುಕೊಂಡಿದ್ದಾಳೆ.

ರಾಮಣ್ಣನ ಅವತಾರವೆ ಮೋಹನ ! ಅಲ್ಲ—ರಾಮಣ್ಣನೊಡನೆ ತಾನು ಬಾಳಿದ ಸುಖದ ಅನುಭವದ ಪ್ರತೀಕ ಮೋಹನ. ಅದಕಾಗಿಯೆ ಮೋಹನನ ಬಗ್ಗೆ ತನಗೆ ಇಷ್ಟೊಂದು ಮಮತೆ ಇರಬಹುದೆ ? ತಾಯ್ತನದ ಮಮತೆಗೆ ನಿಸ್ವಾರ್ಥದೃಷ್ಟಿ ಇರುವುದೆಂದು ಹೇಳುತ್ತಾರೆ. ತನ್ನದಂತೂ ಹಾಗಿಲ್ಲ ಎಂಬ ವಿಚಾರ ಅನೇಕಸಲ ಕುಮುದಳಿಗೆ ಬರುತ್ತಿದ್ದಿತು.

ಮೋಹನನನ್ನು ತಾನು ಪ್ರೀತಿಸುತ್ತಿದ್ದುದು ಮೋಹನನಿಗಾಗಿ ಅಲ್ಲ, ಮೋಹನನಲ್ಲಿ ಕಂಡುಬರುವ ರಾಮಣ್ಣನ ಗುರುತಿಗಾಗಿ. ಅದಕ್ಕಾಗಿಯೆ ಮೊದಮೊದಲು ಮೋಹನನನ್ನು ಕಂಡರೆ ಒಮ್ಮೊಮ್ಮೆ ಇಲ್ಲದ ಸಿಟ್ಟು ಬರುತ್ತಿತ್ತು ತನಗೆ. ಪಾಪ ! ಇನ್ನೊಬ್ಬರ ಮೇಲಿನ ಸಿಟ್ಟಿಗಾಗಿ ಮೋಹನನನ್ನು ಎಷ್ಟು ಸಲ ಹೊಡೆದಿರಲಿಲ್ಲ ತಾನು !

ಒಮ್ಮೆಯಂತೂ—ಅದನ್ನೆಂದಿಗೂ ಮರೆಯುವಂತಿರಲಿಲ್ಲ ಕುಮುದ. ಈಗಲೂ ಆ ದೃಶ್ಯ ಕಣ್ಣು ಕಟ್ಟಿದಂತಿದೆ. ಮೋಹನನನ್ನು ಎತ್ತಿಕೊಂಡು ತಾನು ನಿಂತಿದ್ದಾಳೆ; ಇದಿರಿನಲ್ಲಿ ರಾಮಣ್ಣ ಏನೇನೊ ಮಾತನಾಡುತ್ತಿದ್ದಾನೆ. ಗಂಡನ ಸ್ವಭಾವದಂತೆ ತನ್ನನ್ನು ಒಲಿಸಿಕೊಳ್ಳಲು ಯತ್ನಿಸುತ್ತಿದ್ದಾನೆ; ಅವನ ಕಣ್ಣೊಳಗಿನ ಕಳೆಯನ್ನು ನೋಡಿದಾಕ್ಷಣ ತನಗೆ ತಿಳಿದಿತ್ತು ರಾಮಣ್ಣನ ಹೃದಯ ತನಗಾಗಿ ಹಸಿದಿದೆ ಎಂದು. ಎಚ್ಚರದಿಂದಿರಬೇಕು, ಇವನಿಗೆ ನಾನೆಂದರೆ ಬರೀ ವಿಲಾಸದ ವಸ್ತುವಾಗಿದ್ದೇನೆ, ಹಿಂದಿನ ಕಾಲದ ಹೆಂಡಂದಿರು ಉಪಯೋಗಿಸುತ್ತಿದ್ದ ಎಂಜಲೆಲೆಯಾಗಿದ್ದೇನೆ. ನನಗೂ ಹಕ್ಕಿದೆ ಎಂಬುದನ್ನು ಇವನು ಮರೆತಿದ್ದಾನೆ, ಎಚ್ಚರದಿಂದಿರಬೇಕು – ಎಂದು ತಾನು ಹೆಚ್ಚು ಮಾತನಾಡದೆ ಅವನ ಮಾತಿನ ಬಲೆಯನ್ನು ತಪ್ಪಿಸಿಕೊಳ್ಳುತ್ತಲಿದ್ದಾಳೆ. ಆಗ ನಡೆಯಿತು ಮೋಹನನ ಕಿಡಿಗೇಡಿತನ; ಅವನನ್ನು ಕರೆದುಕೊಳ್ಳುವ ನೆವದಿಂದ ನಡೆಯಿತು ರಾಮಣ್ಣನ ಕಿಡಿಗೇಡಿತನ.

ಅಂದು ಮೋಹನನನ್ನು ತಾನು ಎಷ್ಟುಪರಿಯಾಗಿ ಥಳಿಸಿದ್ದಳು! ಯಾಕೆ? ಮುಂದೆ ತಿಳಿದಿತ್ತು ತನಗೆ ಯಾಕೆ ಎಂಬುದು. ಮೋಹನನನ್ನು ಥಳಿಸಿದ್ದು ಯಾಕೆ? ತನ್ನ ಅಸ್ಥಿರಸ್ವಭಾವವನ್ನು ಅವನು ಬಯಲಿಗೆಳೆದನೆಂದು. ರಾಮಣ್ಣನ ಕೈ ತನ್ನ ಎದೆಗೆ ಸೋಂಕಿದೊಡನೆ, ಆ ಕ್ಷಣದಲ್ಲಿ ತನ್ನ ಬುದ್ಧಿ–ನಿರ್ಣಯಗಳೆಲ್ಲ ಮಣ್ಣುಪಾಲಾಗಿದ್ದುವು. ಸೋಂಕಿದ ಕೈಯನ್ನು ಗಟ್ಟಿಯಾಗಿ ಹಿಡಿದುಕೊಳ್ಳ-ಬೇಕು, ಎದೆ ಹುಣ್ಣಾಗುವಂತೆ ಬಿಗಿಯಾಗಿ ಅವನನ್ನು ತಬ್ಬಿಕೊಳ್ಳಬೇಕು ಎಂದೆನ್ನಿಸಿತ್ತು. ಮೋಹನ ಹೆಚ್ಚಾಗಿ ಅಳತೊಡಗಿದ್ದ, ಪಾಪ ! ಆ ಕೂಸು ತನ್ನ ಕಸುವಿನ ಹಿಡಿತವನ್ನು ತಡೆಯದಾಗಿರಬಹುದು. ರಾಮಣ್ಣನಿಗಾಗಿ ತಾನು ಇದುವರೆಗೆ ಬುದ್ಧಿಪೂರ್ವಕವಾಗಿ ಬೆಳೆಯಿಸಿಕೊಂಡ ದ್ವೇಷವೆಲ್ಲ ಒಂದು ಕ್ಷಣದಲ್ಲಿ ಮಾಯವಾಗಿತ್ತಲ್ಲ ! ಹಸಿದ ದೇಹ ನಿತ್ರಾಣವಾದಂತೆ

ನಡುಗುತ್ತಿತ್ತು; ತುಟಿ ತೋಯ್ದಿದ್ದುವು; ಹೃದಯದೊಳಗೆ ಎಲ್ಲಿಯೊ ಜುಮ್ ಎನ್ನಿಸಿದಂತಾಗಿತ್ತು; ತನ್ನ ಎಚ್ಚರವೆ ತಪ್ಪುವುದೇನೊ ಎಂದೆನ್ನಿಸಿತ್ತು. ಅಷ್ಟರಲ್ಲಿ ಮೋಹನನ ಅಳು ಕೇಳಿ ಎಚ್ಚರಾದಂತಾಯ್ತು, ತಾನು ತಟ್ಟನೆ ಒಳಗೆ ಹೋಗಿದ್ದಳು.

ಪಾಪ! ಮೋಹನನ ತಪ್ಪೇನು ಇದೆಲ್ಲ ನಡೆದುದರಲ್ಲಿ? ಆದರೂ ಆ ಕ್ಷಣದಲ್ಲಿ ಅಳುವ ಮೋಹನನು ಲಕ್ಷ್ಯಕ್ಕೆ ಬಂದೊಡನೆ ಬಲವಾಗಿ ಒಂದೇಟನ್ನು ಬಿಗಿದಿದ್ದಳು. ಅವನ ಅಳುವು ಹೆಚ್ಚಿದಂತೆ ತನ್ನ ಆವೇಶವೂ ಹೆಚ್ಚಿತ್ತು. ಒಳಗೆ ಹುದುಗಿದ್ದ ಎಲ್ಲ ದ್ವೇಷವೂ ಹೊರಬಿದ್ದಿತೇನೊ! ನನ್ನ ಮೂರ್ಖತನದ ಹೊರ–ಗುರುತು, ನನ್ನ ವ್ಯಭಿಚಾರವೃತ್ತಿಯ ಮೂರ್ತಿ, ನನ್ನನ್ನು ಅವಮಾನಕಾರಕ ಜೀವನದಲ್ಲಿ ಉಳಿಸಿದ ಕಾರಣ–ಎಂದು ಏನೇನೊ ಮನಸ್ಸಿನಲ್ಲಿ ಹೊಳೆದಿದ್ದು ತಾನು ಆ ವಿಚಾರಗಳ ಆವೇಶದ ತಾಳಕ್ಕೆ ಸರಿಯಾಗಿ ಎನ್ನುವಂತೆ ಮೋಹನನನ್ನು ಹೊಡೆದಿದ್ದಳಲ್ಲ?

ಆ ನೆನಪಿಗಾಗಿ ಇಂದು ಕುಮುದ ಗದಗದ ನಡುಗಿದಳು ಒಂದು ಕ್ಷಣ.

ಅದೆಂಥಾ ಪರಿ ಹೊಡೆದದ್ದು! ಹೊಡೆಹೊಡೆದಂತೆ ಆವೇಶ ಹೆಚ್ಚಾಗಿ ಮೈಮೇಲಿನ ಎಚ್ಚರವೆ ತಪ್ಪಿತ್ತೊ ಏನೊ ತನಗೆ! ರಾಮಣ್ಣ ಅಲ್ಲಿ ಬಂದುದು ಗೊತ್ತಿರಲಿಲ್ಲ, ತನ್ನನ್ನು ತಡೆದುದು ಗೊತ್ತಿರಲಿಲ್ಲ, ಕೊನೆಗೆ ತನ್ನದೊಂದು ಏಟು ರಾಮಣ್ಣನ ಭುಜಕ್ಕೆ ತಗುಲಿದಾಗೆಯೆ ತನಗೆ ಎಚ್ಚರವಾಗಿತ್ತು. ಅಳುವ ಮಗುವನ್ನು ಒಂದು ಕೈಯಿಂದೆತ್ತಿಕೊಂಡು, ಇನ್ನೊಂದು ಕೈಯಿಂದ ಎತ್ತಿದ ತನ್ನ ಕೈಯನ್ನು, ಸಿಟ್ಟಿನಿಂದಲ್ಲದಿದ್ದರೂ, ಬಲವಾಗಿ ತಡೆದು ಹಿಡಿದಿದ್ದಾನೆ ರಾಮಣ್ಣ.

ಅಂದು ರಾಮಣ್ಣ ಸಿಟ್ಟಿಗೆದ್ದಿದ್ದರೆ? ತನ್ನೊಡನೆ ಜಗಳಾಡಿದ್ದರೆ? ಆದರೆ, ರಾಮಣ್ಣ ಏನನ್ನೂ ಮಾಡಿರಲಿಲ್ಲ. ಅವನು ಸಿಟ್ಟಿಗೆದ್ದಿದ್ದರೆ ತಾನೂ ಸಿಟ್ಟಿಗೇಳುತ್ತಿದ್ದಳು, ಜಗಳಾಡಿದ್ದರೆ ತಾನೂ ಆವೇಶದಿಂದ ಕೂಗಾಡಬಹುದಿತ್ತು, ಕೊನೆಗೆ ಅವನು ತನ್ನನ್ನೆ ಚನ್ನಾಗಿ ಹೊಡೆದಿದ್ದರೂ ಸರಿ ಎನ್ನಿಸಬಹುದಿತ್ತು. ಆದರೆ ಆತ ಏನನ್ನೂ ಮಾಡಿರಲಿಲ್ಲ. ಮಗುವನ್ನೆತ್ತಿಕೊಂಡು ತನ್ನನ್ನು ತಡೆದು, ತಾನೇ ಅಪರಾಧ ಮಾಡಿರುವನೊ ಎನ್ನುವಂತೆ ಕರುಣಾಜನಕ ಮುಖ ಮುದ್ರೆಯಿಂದ ತನ್ನನ್ನು ನೋಡುತ್ತ ನಿಂತುಬಿಟ್ಟಿದ್ದ. ಒಮ್ಮೆ

ಅನ್ನಿಸಿತ್ತು ಆ ಪರಿ ನಿಂತುದಕ್ಕಾಗಿ ಅವನಿಗೆಯೆ ಏಟನ್ನು ಕೊಡಬೇಕು ಎಂದು ಅವನು ಸುಮ್ಮನೆ ನಿಂತುದಕ್ಕೆ ತನಗೆ ಅಸಹನೀಯ ನಾಚಿಕೆಯಾಗಿತ್ತು.

"ಬ್ಯಾಡಿದ್ದರ ನಾನೇ ಹೊರಗೆ ಹೋಗ್ತೀನಿ" ಅಂದಿದ್ದ.

ತನಗೆ ಮೊದಲು ಆ ಮಾತಿನ ಸಂದರ್ಭವೆ ತಿಳಿದಿರಲಿಲ್ಲ.

"ನನ್ನಿಂದ ನಿನಗ ಇಷ್ಟೊಂದು ತ್ರಾಸ ಆಗಿದ್ದರ ನಾನು ಮನೆ ಬಿಟ್ಟು ಹೋಗ್ತೀನಿ" ಅಂದಿದ್ದ.

ಕೊನೆಗೂ ಮಾತನಾಡಿದ, ಮಾತಿಗೆ ಮಾತನ್ನು ಇದಿರಾಡಿ ಮನಸ್ಸನ್ನು ಹಗುರಮಾಡಿಕೊಳ್ಳಲು ಅವಕಾಶ ಸಿಕ್ಕಿತ್ತು.

"ನೀವು ಯಾಕ ಹೋಗ್ತೀರಿ, ಮನೇ ಯಜಮಾನರು ನೀವು!" ಎಂದಿದ್ದಳು—ತಾನು.

"ನನ್ಹಾಂಗ ನಿನ್ದೂ ಮನೆ ಇದು, ಕುಮುದಾ"

"ನನ್ನ ಮನೆ ಹ್ಯಾಂಗಾದೀತು? ಗತಿಗಿಲ್ದೆ ಆಶ್ರಯಕ್ಕ ಬಿದ್ದ ಹೆಣ್ಣು ನಾನು!"

"ಕುಮುದಾ, ಕುಮುದಾ, ಇಂಥಾ ಮಾತನ್ನಾಡಬಾರದು ನೀನು" ಎಂದು ಬೇಡಿಕೊಂಡಿದ್ದ.

"ಅಂದ್ರ ಎಂಥಾ ಮಾತನ್ನ ಆಡಬೇಕು? ನನ್ನ ಮಕ್ಕಳ ಮ್ಯಾಲ ಕೈ ಮಾಡ್ಲಿಕ್ಕೆ ನನಗಧಿಕಾರ ಇಲ್ಲ, ಈ ಮನೀವಳಗ!" ಆ ಮಾತಿಗೆ ತನಗೆ ಅಳು ತಡೆಯದಾಗಿತ್ತು.

"ನಿನ್ಗ ಯಾವ ಅಧಿಕಾರಕ್ಕೂ ಕೊರತೆ ಇಲ್ಲ, ಕುಮುದಾ, ಈ ಮನೀ-ವಳಗ"

"ನನಗ ನಿಂ ಮನೀನೂ ಬ್ಯಾಡ, ಅಧಿಕಾರಾನೂ ಬ್ಯಾಡ" ಎನ್ನುತ್ತ ಅವನು ಹಿಡಿದಿದ್ದ ತನ್ನ ಕೈಯನ್ನು ಕೊಸರಿಕೊಳ್ಳಲು ಯತ್ನಿಸಿದ್ದಳು.

"ಕುಮುದಾ—" ರಾಮಣ್ಣ ಕೈಯನ್ನು ಬಿಟ್ಟಿರಲಿಲ್ಲ –"ಕುಮುದಾ, ನನಗೆ ಗೊತ್ತಿದೆ ನಿನಗ ಯಾವುದೊ ಅಸಮಾಧಾನ ಇದೆ ಅಂತ. ಹೇಳು. ನನ್ನಿಂದ ಅದು ದೂರ ಆಗೋಹಾಗಿದ್ದರ ನಾನು ಬೇಕಾದ್ದನ್ನು ಮಾಡ್ಲಿಕ್ಕೆ ತಯ್ಯಾರಿದ್ದೀನಿ. ನನ್ದೆ ಏನಾದ್ರೂ ತಪ್ಪಾಗಿದ್ದರ ಹೇಳು—"

"ನಿಂ ತಪ್ಪು! ಅಯ್ಯಯ್ಯ! ನಿಮ್ಮಿಂದ ಎಂದಾದರೂ ತಪ್ಪಾದೀತ?

ಬುದ್ಧಿವಂತರು, ಹೆಸರಾದ ಸಾಹಿತಿ, ನೀವು ಮಾಡಿದ್ದನ್ನ ಮೆಚ್ಚುವವರು ಇಷ್ಟು ಜನ ಇರೋವಾಗ—"

"ಕುಮುದಾ, ಈ ರೀತಿ ನೀನು ಮಾತನಾಡಿದರ ನಾನು ಏನು ಹೇಳಲಿ ? ಮನೀವಳಗ, ಅದೂ ನಿನ್ನ ಕೂಡ ನಾನು ಒಣ ಪೊಡ್ಡಿಸ್ತನದ ಸೋಗಿನಿಂದ ನಡೆದುಕೊಂಡೀನೇ ಎಂದಾದರೂ ?"

"ನನ್ನ ಕೂಡ ನೀವು ಹ್ಯಾಂಗ ನಡೆದುಕೊಂಡರೂ ಅಷ್ಟೆ, ಹಾದಿ ಬಿಟ್ಟು ಗತಿಗೆಟ್ಟ ಹೆಂಗಸು—"

"ಕುಮುದಾ, ಕುಮುದಾ, ಈ ಪರಿ ಕಠೋರವಾಗಿ ಮಾತಾಡಬ್ಯಾಡ. ಹಾದಿಬಿಟ್ಟ ಮಾತು ನುಡೀಬ್ಯಾಡ. ಹಾದಿ ಬಿಟ್ಟವ ನಾನು. ನನ್ನನ್ನ ಸರಿಯಾದ ಹಾದಿಗೆ ಹಚ್ಚುವಾಕೆ ನೀ, ಕುಮುದಾ—"

"ನೀವೂ ಬ್ಯಾಡ, ನಿಮ್ಮ ಹಾದೀನೂ ಬ್ಯಾಡ" ಎಂದು ತಾನು ಕೊನೆಗೊಮ್ಮೆ ಕೈಕೊಸರಿಕೊಂಡು ದೂರ ಸರಿದಿದ್ದಳು.

ಕೈಕೊಸರಿದ್ದಕ್ಕೆ ಗಾಬರಿಯಾದ ಕೂಸು – ಮೋಹನ – ಮತ್ತೆ ಅಳ ತೊಡಗಿದ್ದ. ಕುಮುದಳ ಕಡೆ ಹೋಗಲು ಹವಣಿಸಿದ್ದ. ರಾಮಣ್ಣನಿಗೆ ಹೆದರಿಕೆಯಾಗಿತ್ತೇನೊ, ತಾನು ಮತ್ತೆ ಕೂಸನ್ನು ಹೊಡೆಯುವಳು–ಎಂದು. ರಾಮಣ್ಣ ಕೂಸನ್ನೆತ್ತಿಕೊಂಡು ಅನುಮಾಸಿನುತ್ತಿದ್ದ, ಕೂಸು ಕುಮುದಳ ಕಡೆ ಹೋಗಲು ಹಟಮಾಡುತ್ತಿತ್ತು, ಕೊನೆಗೆ ಅಳಲು ತೊಡಗಿತ್ತು.

ಕುಮುದಳಿಗೂ ತಡೆಯದಂತಾಗಿತ್ತು. ಆವೇಶದಿಂದ ಕೂಸನ್ನು ಕಸಿದುಕೊಂಡಿದ್ದಳು.

"ಕುಮುದಾ, ಕುಮುದಾ, ನನ್ನಾಣೆಯಾಗಿದೆ—" ಎಂದು ರಾಮಣ್ಣ ಕೂಸನ್ನು ಗಟ್ಟಿಯಾಗಿ ಹಿಡಿದುಕೊಳ್ಳಲು ಯತ್ನಿಸಿದ್ದ.

ತಾನು ಬಿಟ್ಟಿರಲಿಲ್ಲ.

"ನಾನು ಹೊರಗ ತಿರುಗಾಡಿಸಿಕೊಂಡು ಬರ್ತೀನಿ, ಕುಮುದಾ" ಎಂದಿದ್ದ.

"ನೀವು ತಿರುಗಾಡಿಸಿಕೊಳ್ಳೋದೂ ಬ್ಯಾಡ, ಬರೋದೂ ಬ್ಯಾಡ. ನಾನೇ ಹೊರಗೆ ಕರೆದುಕೊಂಡು ಹೋಗ್ತೀನಿ, ತಿರುಗಿ ಬರೋದೇ ಇಲ್ಲ. ನೀವಾಯ್ತು ನಿಮ್ಮನೇ ಆಯ್ತು, ಇದ್ದು ಬಿಡಿರಿ" ಎಂದು ಅಲ್ಲಿಂದ ಹೊರಟು,

ತನ್ನ ಕೋಣೆಗೆ ಬಂದಿದ್ದಳು, ಕೂಸನ್ನು ಕುಕ್ಕರಿಸಿ ತನ್ನ ಸಾಮಾನುಗಳನ್ನು ಆವರಿಸತೊಡಗಿದ್ದಳು.

ಹುಂ... ಎಂದು ಕುಮುದ ಸ್ಮೃತಿ–ಪ್ರವಾಹದಲ್ಲಿ ಮುಳುಗಿ ಮೇಲೆದ್ದವಳಂತೆ ಉಸುರ್ಗರೆದಳು.

ಇಂದು ಆ ಮಾತು ನಡೆದಿದ್ದರೆ ತಾನು ಹಾಗೆ ವರ್ತಿಸಬಹುದಿತ್ತೆ? ಕುಮುದಳಿಗೆ ಕುಳಿತಲ್ಲಿಯೆ ಈ ವಿಚಾರ ಬಂದಿತು. "ತಿರುಗಿ ಬರೋದಿಲ್ಲ" ಎಂದಿದ್ದಳು ಅಂದು, ಆಮೇಲೆ ಏನೇನು ನಡೆದುಹೋಯಿತೊ! ಆದರೆ ಇಂದಿನ ಕ್ಷಣದಲ್ಲಿ ಇಲ್ಲಿಯೆ ಇದ್ದಾಳೆ, ರಾಮಣ್ಣನ ಮನೆಯಲ್ಲಿ; ಅಲ್ಲ, ತನ್ನ ಮನೆಯಲ್ಲಿ ಉಹುಂ, ಅದೂ ಅಲ್ಲ, ಮೋಹನನ ಮನೆಯಲ್ಲಿ. ಹುಚ್ಚು ತಾನು! ತನ್ನ ದುರಭಿಮಾನಕ್ಕಾಗಿ ಆ ಮಾತನ್ನು ಹೇಳಿಕೊಳ್ಳುತ್ತಿದ್ದಾಳೆ. ಇದು ರಾಮಣ್ಣನ ಮನೆಯೂ ಅಹುದು, ತನ್ನ ಮನೆಯೂ ಅಹುದು; ಅದಕ್ಕಾಗಿ ಇದು ಮೋಹನನ ಮನೆ. ತಮ್ಮಿಬ್ಬರ ತಪಸ್ಸಿನ ಫಲ ಮೋಹನ, ಇಲ್ಲವಾದರೆ ಮೋಹನ ಯಾರು?

ಇಂದು ತಾನು ಹಾಗೆ ನಡೆಯುತ್ತಿರಲಿಲ್ಲ, ಅದಕ್ಕೆ ನಿಜವಾದ ಕಾರಣ ಬೇರೆ ಎಂಬುದನ್ನು ಅನಿವಾರ್ಯವಾಗಿ ಅವಳ ಮನಸ್ಸು ಒಪ್ಪುತ್ತಿದೆ. ಇಂದು ತಾನು ಯಾವ ಕಾರಣಕ್ಕಾಗಿ ತಾನು ಹಾಗೆ ವರ್ತಿಸಲಾರಳೊ, ಅದೇ ಕಾರಣಕ್ಕಾಗಿ ಅಂದು ತಾನು ಹಾಗೆ ವರ್ತಿಸಿದ್ದು—ಎಂಬುದನ್ನೂ ಅವಳು ಬಲ್ಲಳು.

ಆ ಕಾರಣ—ರಾಮಣ್ಣನಿಗಾಗಿ ತನ್ನಲ್ಲಿದ್ದ ಭಾವನೆ.

ಕುಮುದಳು ಯಾವಾಗಲೂ ಸೋಲುತ್ತಿರುವುದಕ್ಕೆ ಆ ಭಾವನೆಯೆ ಕಾರಣ. ಇಂದಿನವರೆಗೂ ಪ್ರತಿಯೊಂದು ಸಂದರ್ಭದಲ್ಲಿ ಕೊನೆಗೆ ಸೋತವಳು ತಾನೇ ಎಂದು ಅವಳ ಹಟ.

ಒಂಭತ್ತು ವರ್ಷಗಳ ಮುಂಚಿನ ಅಂದಿನ ಸಂದರ್ಭ ತನ್ನ ಮೊದಲ ಸೋಲು ಎಂದು ಆಕೆ ತಿಳಿದುಕೊಂಡಿದ್ದಳು. "ನಾನೇ ಹೊರಗೆ ಕರೆದುಕೊಂಡು ಹೋಗ್ತೀನಿ, ತಿರುಗಿ ಬರೋದೇ ಇಲ್ಲ" ಎಂದು ತಾನು ಆರ್ಭಟಿಸಿದ್ದೇ ಸೋಲಿನ ಮೊದಲ ಘೋಷಣೆಯಾಗಿತ್ತು.

ಯಾಕೆ? ತಾನು ಯಾಕೆ ಆ ಮಾತನ್ನು ಹೇಳಿದ್ದಳು? ಪೂರ್ತಿ

ವಿಚಾರವನ್ನು ಮಾಡಿಕೊಂಡೇ? ಅಲ್ಲ. ಒಂದು ನಿಶ್ಚಯಕ್ಕೆ ಬಂದೇ? ಅದೂ ಅಲ್ಲ. ಮನಸ್ಸಿನೊಳಗಿದ್ದುದನ್ನು ಧೈರ್ಯವಾಗಿ ಆಡಿತೋರಿಸುವುದಕ್ಕೆಯೆ? ಉಹುಂ – ಅಂತಹ ಯಾವ ಕಾರಣಗಳಿಗಾಗಿಯೂ ಅಲ್ಲ.

ಒಂದೇ ಒಂದು ಕಾರಣ, ಹೆದರಿಕೆ. ತನ್ನ ಬಗ್ಗೆ ಹೆದರಿಕೆ, ರಾಮಣ್ಣನಿಗಾಗಿ ಹೆದರಿಕೆ.

ರಾಮಣ್ಣನ ಕೈ ತನ್ನ ಮೈಗೆ ತಗುಲಿದಾಗಲೇ ಆಕೆಗೆ ಸ್ಪಷ್ಟವಾಗಿದ್ದಿತು, ಇದು ಜನ್ಮಜನ್ಮಾಂತರಗಳ ಸಂಬಂಧ, ಒಂದು ಮಾತಿನಿಂದ ಕಡಿದುಹಾಕಲು ಶಕ್ಯವಿಲ್ಲ ಎಂದು.

ಒಮ್ಮೆ ರಾಮಣ್ಣನೆ ಹೇಳಿದ್ದಿಲ್ಲವೆ – ದುಷ್ಯಂತ ಶಕುಂತಲೆಯರ ಕತೆಯನ್ನು ?

"ಶಕುಂತಲೆ ನಾನಾಗಿದ್ರೆ ದುಷ್ಯಂತನ್ನ ಸಮೀಪ ಬರಗೊಡತಿದ್ದಿಲ್ಲ" ಎಂದಿದ್ದಳು ತಾನು.

"ಯಾಕ? ಅಂಥಾದ್ದೇನು ಮಾಡಿದ್ದ ಅವ?" ಎಂದು ರಾಮಣ್ಣ ಕೇಳಿದ್ದಕ್ಕೆ ತನಗೆ ಆಶ್ಚರ್ಯವಾಗಿದ್ದಿತು.

"ಏನಂದ್ರಿ? ಅಂಥಾದ್ದೇನ್ಮಾಡಿದ್ದ ಅಂತೀರಾ? ಇನ್ನೇನು ಮಾಡ್ಬೇಕು? ಏಕಾಂತದೊಳಗ ಮದುವೆ ಮಾಡಿಕೊಂಡು ಆಕೆ ಬಸಿರಿದ್ದಾಗ ನನಗೇನು ನೆನಪಿಲ್ಲ ನಿನ್ನನ್ನ ಮದಿವೆ ಆದದ್ದು – ಅಂದ್ರ?"

"ಪಾಪ! ಅವನ್ದೇನು ತಪ್ಪು? ಶಾಪದ ಪ್ರಭಾವಕ್ಕ ಸಿಕ್ಕಿದ್ದ."

"ಅಯ್ಯಯ್ಯಯ್ಯಯ್ಯಯ್ಯ! ಯಾರಿಗ್ಹೇಳ್ತೀರಿ ಈ ಕಾಗೆ – ಗುಬ್ಬಿ ಕತೆಯನ್ನ? ಕಾಲಿದಾಸನೂ ಗಂಡಸು, ದುಷ್ಯಂತನೂ ಗಂಡಸು—"

"ಆದರೆ ಈ ಕತೆಯನ್ನು ಮೊದಲು ಬರೆದವ ಕಾಲಿದಾಸ ಅಲ್ಲ. ಮಹಾಭಾರತದೊಳಗ ಅದ ಈ ಕತೆ."

ಅಂದ್ರೆ? ಈ ಹಾಳು ಕತೆಯನ್ನೆ ಯಾಕೆ ಆರಿಸಿಕೊಂಡನೊ! ಯಾರಾದರೂ ನಗಲಿಕ್ಕಿಲ್ಲ?"

"ಯಾಕಂತ?"

"ಅಯ್ಯ! ಯಾಕಂದ್ರೇನು? ಮದಿವೆ ಮಾಡಿಕೊಂಡದ್ದೆ ನೆನಪಿಲ್ಲ ಅನ್ನೋ ಪ್ರಾಣಿ ಎಂಥಾವ ಆತ!"

"ದೊಡ್ಡ ಮನುಷ್ಯ ಆತ."

"ಸಾಕು, ತಗೀರಿ!"

"ಅದ್ಯಾಕ, ಕುಮುದಾ? ನಾಳೆ ನಾನು ಅಂದೆ ಅಂತ ತಿಳಿ, ನಿನ್ನ ಮದಿವಿ ಆದದ್ದು ನೆನಪಿಲ್ಲ ಅಂತ. ಆಗ ಜನ ನನಗ ಹುಚ್ಚ ಅಂತಾರೊ ಇಲ್ಲೊ?"

"ಅದಕ್ಕಿಂತ ಕೆಟ್ಟದೇನೂ ಅನ್ನಲಿಲ್ಲ ಅಂದ್ರ ನಿಮ್ಮ ಸುದೈವ."

"ಅಹುದೊ ಇಲ್ಲೊ? ನಾನು ಮಾಡಿದರ ಹುಚ್ಚ ಅಂತಾರ, ಕೋರ್ಟಿನೊಳಗ ಕೇಸ್ ಹಾಕ್ತಾರ; ಅದನ್ನೆ ದುಷ್ಯಂತ ಮಾಡಿದ, ಅವನಿಗೆ ದೊಡ್ಡ ಮನುಷ್ಯ ಅಂದರು, ನಾಟಕಾ ಬರೆದರು."

"ಸಾಕು, ನಿಮ್ದು ಒಂದು ಮಾತಿನ ರೀತೀನೆ."

"ಅಲ್ಲ, ನೀನು ಶಕುಂತಲಾ ಆಗಿದ್ದರ ಹೀಂಗ್ಮಾಡ್ತಿದ್ದಿ ಅಂದಿ—"

"ಅಹುದು, ಖಂಡಿತ ಅವನ್ನ ಅವನ ಹಾದೀಗೆ ತಿರುಗಿ ಕಳಿಸಿಬಿಡ್ತಿದ್ದೆ."

"ನೀನು ಹಾಂಗ ಮಾಡ್ತಿದ್ದಿಲ್ಲ ಅನ್ನೋದನ್ನ ತೋರಿಸೋದಕೇನೆ ಕಾಲಿದಾಸ ಆ ನಾಟಕಾ ಬರೆದಾನ."

"ನಾನು ಮಾಡ್ತಿದ್ದಿಲ್ಲ ಅನ್ನೋದನ್ನ ತೋರಿಸೋದಕ!"

"ಅಂದ್ರ, ನೀನೇ ಶಕುಂತಲಾ ಆಗಿದ್ದರ—ಅಂದೆ."

"ಏನಂತೀರೋ ಏನೊ!"

"ಹಾಗಲ್ಲ. ಇಲ್ಲಿ ನೋಡು, ದುಷ್ಯಂತ – ಶಕುಂತಲೇರ ಮದಿವೆ ಹ್ಯಾಂಗಾಯ್ತು? ದುಷ್ಯಂತಗ ಅರಮನೇವಳ್ಗ ಬೇಕಾದಷ್ಟು ಸೌಂದರ್ಯವತಿಯರಿದ್ದರು; ಶಕುಂತಲಾಗಂತೂ ಪ್ರೇಮ–ಮದುವೆ ಇಂಥಾದ್ದರ ವಿಚಾರ ಕೂಡ ಗೊತ್ತಿರಲಿಲ್ಲ. ಇದಲ್ದೇ, ದುಷ್ಯಂತ ಅಲ್ಲಿಗೆ ಬಂದದ್ದು ಬ್ಯಾಟಿಗೆ ಅಂತ. ಏನೊ, ಕಣ್ವನ ಆಶ್ರಮ ಹತ್ತಿರ ಇದೆ ಅಂತ ಗೊತ್ತಾಯ್ತು, ಮಹರ್ಷಿಗೆ ಕೈ ಮುಗಿದು ಹೋಗೋಣ ಅಂತ—"

"ಆ ಕತೆ ಎಲ್ಲಾ ಗೊತ್ತದ ನನಗ—"

"ಅಲ್ಲ, ಆ ಕತೆಯ ಮೋಜು ತೋರಿಸಿಕೊಡ್ತೀನಿ ನಿನ್ಗ. ಅಂದ್ರೆ ಯಾರಿಗೂ ಯಾವ ಕಲ್ಪನೇನೂ ಇಲ್ದೆ ಅಕಸ್ಮಾತ್ ಭೆಟ್ಟಿಯಾಯ್ತು, ಭೆಟ್ಟ

ಪರಿಚಯು ಆಯ್ತು, ಪರಿಚಯು ಆಕರ್ಷಣೆಯಾಯ್ತು, ಆಕರ್ಷಣೆ ಸ್ನೇಹ ಆಯ್ತು, ಸ್ನೇಹ ಪ್ರೇಮು ಆಯ್ತು—"

"ಕಡೆಗೆ ಮದುವೆ ಆಯ್ತು."

"ಹಂ, ಇಷ್ಟೆಲ್ಲ ಸ್ವಲ್ಪೇ ದಿವಸಗಳೊಳಗ ಆಯ್ತು."

"ಅಹುದು. ಅದಕ್ಕೂ ನಾ ಹೇಳೋದಕ್ಕೂ—"

"ಸಂಬಂಧ ಅದ. ಕುಮುದಾ. ಸುರುತಿಲ್ಲದೆ, ಮುಂಚೆ ವಿಚಾರ ಇಲ್ದೆ, ಅಗತ್ಯ ಇಲ್ದೆ, ಹಿರಿಯರ ಸಹಾಯ ಇಲ್ದೆ ಮದುವೆ ಆಯ್ತು. ಯಾಕ?"

"ದುಷ್ಯಂತ ಪ್ರೈವಾನ್ ಅಂತ."

"ಹಹ! ಶಕುಂತಲಾ ಏನು ಕಡಿಮೆ? ಇಬ್ಬರದೂ ಜವಾಬ್ದಾರಿ. ಇಬ್ಬರದೂ ಪ್ರೇಮು ಅಷ್ಟು ಸ್ಫುರಿತ, ಅಷ್ಟು ಪರಸ್ಪರ ಇದ್ದಿತು, ಜಗತ್ತಿನೊಳಗ ಅವರು ಎಲ್ಲಿದ್ದರೂ ಒಂದಿಲ್ಲ ಒಂದಿನ ಕೂಡಿ ಬಂದೇ ಬರುತ್ತಿದ್ದರು ಅಂತ ತೋರಿಸಿಕೊಡೋದಕ ಕಾಲಿದಾಸ ಆ ನಾಟಕ ಬರೆದಾನ. ಅದಕ್ಕೇ ಮುಂದೆ ಮಾರೀಚನ ಆಶ್ರಮದೊಳಗ ದುಷ್ಯಂತನ್ನ ನೋಡಿದಾಕ್ಷಣ, ಮೊದಲಸಲ ಕಣ್ವನ ಆಶ್ರಮದೊಳಗ ಅವನನ್ನ ನೋಡಿದಾಗ ಹ್ಯಾಗ ಆಗಿತ್ತೊ ಹಾಗೇ ಆಯ್ತು ಅವಳ ಅವಸ್ಥೆ"

"ಕತೀವಳಗ ಬೇಕಾಧಾಂಗ ಬರೆದುಕೋಬಹುದು, ನನಗಂತೂ ವಿಶ್ವಾಸ ಇಲ್ಲ." ಎಂದಿದ್ದಳು, ಆಗ. ಆ ಮಾತಿನ ವಿಶ್ವಾಸವನ್ನು ಪಡೆಯುವ ಶಿಕ್ಷೆಯನ್ನೆ ತನಗೆ ಕೊಟ್ಟಿತೇನೊ ಎಂದೆನ್ನಿಸುತ್ತಿತ್ತು ಈಗ. ಶಕುಂತಲೆ ಹಾಗೆ ವರ್ತಿಸಿದ್ದು ಸಹಜ ಎಂದು ಈಗ ಯಾವಾಗಲೂ ಒಪ್ಪಿಕೊಳ್ಳಲು ತಾನು ಸಿದ್ಧಳಿದ್ದಳು.

ರಾಮಣ್ಣ ತನ್ನನ್ನು ಮದುವೆಯಾದ ರೀತಿಯನ್ನು ನೆನೆದುಕೊಂಡರೆ ತಾನು ಎಂದೆಂದಿಗೂ ಅವನೊಡನೆ ಸಂಸಾರ ಮಾಡಬಾರದಾಗಿತ್ತು. ತಾನಾಗಿಯೆ ಒಲಿದು ಬಂದವ, ಮೇಲೆ ಸರಳಕ್ಕ ಒಂದೇ ಸವನೆ ಆ ಮಾತನ್ನು ಹೇಳುತ್ತಿದ್ದಾಳೆ, ತನಗೂ ಕೂಡ ಮದುವೆ ಒಪ್ಪಿಗೆಯದಾಗಿತ್ತು; ಆದರೂ ಸರಳಕ್ಕ ಜೀವದಿಂದಿರುವ ವರೆಗೆ ರಾಮಣ್ಣ ಬಹಿರಂಗವಾಗಿ ಆ ಮಾತಿನ ಪ್ರಸ್ತಾವವನ್ನೆ ತೆಗೆದಿರಲಿಲ್ಲ; ಆದರೂ ತನ್ನ ಸಹವಾಸವನ್ನು ಬಯಸುತ್ತಿದ್ದ.

ಸರಳಕ್ಕ ತೀರಿದ ಮೇಲೆ ಕೂಡ ಅವನಾಗಿಯೆ ಆ ವಿಚಾರವನ್ನು ಎತ್ತಿರಲಿಲ್ಲ. ಕೊನೆಗೆ ತಾನು ಗರ್ಭಿಣಿ ಎಂದು ಹೇಳಿದಾಗ ಮದುವೆಗೆ ಒಪ್ಪಿದ್ದ. ಇದರರ್ಥ ವೇನು? ರಾಮಣ್ಣ ತನಗಾಗಿ ಒಲಿದಿರಲಿಲ್ಲ ಎಂದೇ ಅಲ್ಲವೆ? ಬುದ್ಧಿ ಪೂರ್ವಕವಾಗಿ ತನ್ನನ್ನು ಮೋಸಗೊಳಿಸಿದನು—ಎಂದೇ ಅಲ್ಲವೆ? ಇಂತಹ ನೊಡನೆ ಸಂಸಾರ ಮಾಡುವುದು ಯಾವ ಮನಸ್ಸಿನಿಂದ? ಅದರಲ್ಲೂ ಮದುವೆಯ ಉಪಕಾರವನ್ನು ಬೇರೆ ತನ್ನ ಮೇಲೆ ಹೊರಿಸಿದ್ದ! ಮದುವೆ ಯಾಗಿಲ್ಲವೆಂದರೆ ತಾನು ಸ್ವತಂತ್ರಳಾಗಿರಬಹುದಿತ್ತಲ್ಲ? ಮದುವೆಯಾಗಿದ್ದಿಲ್ಲ ವೆಂದರೆ ಅವನ ಮೇಲೆ ತನ್ನದೆ ಅಧಿಕಾರವಿರುತ್ತಿದ್ದಿತು, ಈಗಿನಂತಲ್ಲ. ಈಗ ತಾನು ಮದುವೆಯ ಹೆಂಡತಿ, ಅಧಿಕಾರದ ಭೋಗ್ಯವಸ್ತು. ಮದುವೆಯಾಗಿ ದ್ದಿಲ್ಲವೆಂದರೆ? ಭೋಗ್ಯ-ವಸ್ತುವಿನ ಪ್ರಾಪ್ತಿಗಾಗಿ ಭಿಕ್ಷುಕನಾಗಬೇಕಾಗು ತ್ತಿತ್ತು ಅವನು!

ಹುಂ....ಅದೆಲ್ಲ ಸರಿ. ತನಗೆ ಯಾರೂ ಬೇಡ ಎಂದಿರಲಿಲ್ಲವಲ್ಲ? ಮದುವೆಗೆ ತಾನು ಸಮ್ಮತಿಸಬೇಕಾಗಿರಲಿಲ್ಲವಲ್ಲ? ತಾನು ಸಮ್ಮತಿಸಿ ಈಗ ರಾಮಣ್ಣನನ್ನು ದೂಷಿಸಿದರೆ—?

ದೂಷಣೆ ಎಲ್ಲಿಂದ ಬಂತು, ಹೆಂಗಸಿನ ಹಣೇಬರಹ, ಶಕುಂತಲೆಯ ಕತೆ—ಎಂದು ಉಸುರ್ಗರೆದಳು. ಯಾವುದೊ ಶಕ್ತಿ ತನ್ನನ್ನು ರಾಮಣ್ಣನ ವಶಕ್ಕೆ ಒಪ್ಪಿಸಿಬಿಟ್ಟಿತ್ತು. ತಾನು ಮಾಡುವ ಪ್ರಯತ್ನಗಳೆಲ್ಲ ವ್ಯರ್ಥವಾಗು ತ್ತಿದ್ದವು. ಬುದ್ಧಿ ಒಂದೆಡೆ ಎಳೆದರೆ, ಹೃದಯ ಇನ್ನೊಂದೆಡೆ ಎಳೆಯುತ್ತಿತ್ತು. ತಾನು ಎಷ್ಟೆಷ್ಟು ದೂರವಿರಲು ಯತ್ನಿಸುತ್ತಿದ್ದಳೊ, ಅಷ್ಟಷ್ಟು ಹೆಚ್ಚು ವೇಗದಿಂದ ತನ್ನನ್ನು ಆ ಶಕ್ತಿ ಹತ್ತಿರ ಎಳೆಯುತ್ತಿತ್ತು.

ಅದಕ್ಕಾಗಿ ಯಾವಾಗಲೂ ತನಗೆ ಹೆದರಿಕೆ ಇದ್ದಿತು. ರಾಮಣ್ಣನ ಭೋಗ್ಯವಸ್ತುವಾಗುವುದರಲ್ಲಿ ತನಗೆ ಸಂತೋಷವೆ ಇದ್ದಿತಾದರೂ, ಅವನು ತನ್ನನ್ನು ಬರೀ ಭೋಗ್ಯವಸ್ತು ಎಂದು ತಿಳಿದಲ್ಲಿ ತನಗೆ ಅಸಹ್ಯವೆನ್ನಿಸುತ್ತಿತ್ತು.

ತಾನು ಅವನನ್ನು ಪ್ರೀತಿಸುತ್ತಿದ್ದಂತೆ ಅವನೂ ತನ್ನನ್ನು—

ಇಲ್ಲ, ಆ ಭರವಸೆ ಆಕೆಗಿದ್ದಿರಲಿಲ್ಲ. ಅದಕ್ಕಾಗಿಯೆ ಹೆದರಿಕೆ, ತಾನೆಲ್ಲಿ ಮತ್ತೆ ಅವನ ವಶದಲ್ಲಿ ಸಿಕ್ಕಿಕೊಳ್ಳುವಳೊ—ಎಂದು.

ರಾಮಣ್ಣನ ಸಾನ್ನಿಧ್ಯ ಆ ಹೆದರಿಕೆಯನ್ನು ಹೆಚ್ಚಿಸುತ್ತಿತ್ತು, ಅವನ

ಸ್ಪರ್ಶವಂತೂ—ಅದಕ್ಕಾಗಿ ಅಂದು ಹೇಳಿದ್ದಳು "ತಿರುಗಿ ಬರೋದೇ ಇಲ್ಲ" ಎಂದು.

ಹು. ಆದರೂ ಬಂದೆನಲ್ಲ ? ಬಂದಿರುವೆ, ಮನೆಯನ್ನು ನಡೆಸಿರುವೆ, ಮನೆಯ ಮಗನನ್ನು ಬಳಸಿರುವೆ—

ತಟ್ಟನೆ ತನ್ನ ಹಗಲ-ಗನಸನ್ನು ತಡೆದಳು ಕುಮುದ. ಕೈಗಡಿಯಾರ ವನ್ನು ನೋಡಿಕೊಂಡಳು. "ಇದೇನು ? ಎಷ್ಟು ಹೇಳಿದರೂ ಇನ್ನೂ ಬರಲಿಲ್ಲ ಈ ಮೋಹನ ? ಇಷ್ಟರಲ್ಲಿಯೆ ಸಭೆಗೆ ಕರೆಯಲು ಬಂದರೂ ಬಂದರೆ. ಛಿ ! ಏನು ಹುಡುಗ ಈತ! ಎಲ್ಲಿ ಹೋದನೊ ಮೆರೆಯಲಿಕ್ಕೆ ?" ಎನ್ನುತ್ತ ಎದ್ದು ಮತ್ತೆ ಬಾಗಿಲಿಗೆ ಬಂದಳು.

## ೧೦

"ಇದೇನು ? ಏನೂ ಕಾಣುವುದಿಲ್ಲವಲ್ಲ ?" ಎಂದ ಕಿಟಕಿಯಾಚೆ ಹೊರಗೆ ನೋಡುತ್ತಿದ್ದ ರಾಮಣ್ಣ. ಮರುಗಳಿಗೆಯಲ್ಲಿ ಅವನಿಗೆಯೆ ಆಶ್ಚರ್ಯ ವಾಯಿತು.

ಬೀದಿಗುಂಟ ದನಕರುಗಳು ಸಾಗಿವೆ, ಹಿಂದೆ ದನಕಾಯುವ ಹುಡುಗರ ಅಬ್ಬರ ನಡೆದಿದೆ, ಅದೊ ಅಲ್ಲಿ ಯಾರೊ ಇಬ್ಬರು ಹೊರಟಿದ್ದಾರೆ – ಒಬ್ಬರು ನಿಂತು ನಗುತ್ತಿದ್ದಾರೆ, ಬೀದಿಯ ಈ ಬದಿಗೆ ಸೇರಿದ ಕಾಗೆಗಳು ಒಮ್ಮೆಲೆ ಗುಂಪುಗಟ್ಟಿ ರೆಕ್ಕೆ ಬಡೆಯುತ್ತ ಎದ್ದು ಬೀದಿಯ ಆ ಬದಿಗೆ ಹಾರುತ್ತಿವೆ, ಆ ನಾಯಿ ಅವುಗಳನ್ನು ಹಿಡಿಯಲು ಯತ್ನಿಸಿ ಬೊಗಳುತ್ತಿದೆ.... ಇಷ್ಟೆಲ್ಲ ಕಾಣು-ತ್ತಿದ್ದರೂ ನಾನು "ಏನೂ ಕಾಣುವುದಿಲ್ಲ" ಎಂದೆನಲ್ಲ !

ಮನುಷ್ಯನ ಜಗತ್ತು ಅಂದರೆ ಹೀಗೇನೆ. ತನಗೆ ಬೇಕಿದ್ದರೆ ಕಾಣೋದು, ಇಲ್ಲದಿದ್ದರೆ ಜಗತ್ತೇ ಇಲ್ಲ ಅನ್ನೋದು . ಹುಂ.... ಎಂದು ಏನನ್ನೊ ಗೊಣಗುತ್ತ ಹೆಜ್ಜೆ ಹಾಕತೊಡಗಿದನು. ಕೋಣೆಯ ಉದ್ದಕ್ಕೂ ನಡೆದು ಹಾಗೆಯೆ ಗೊಣಗುತ್ತ ಮತ್ತೆ ಕಿಟಕಿಯ ಹತ್ತಿರ ಬಂದು ಹೊರಗೆ ನೋಡಿದನು. ...."ಕಂಡೂಯಮಾನಾಂ...." ಗೊಣಗುವುದನ್ನು ತಡೆದು ತನ್ನಷ್ಟಕ್ಕೆಯೆ ನಕ್ಕ. ಅಂತೂ ನನ್ನ ಠಕ್ಕತನ ನನಗೆಯೆ ತಿಳಿದುಬಂತು—

ಎಂದು ನಕ್ಕ. ಅದೊಂದು ಅಭ್ಯಾಸ ಅವನಿಗೆ. ಮನಸ್ಸಿನೊಳಗಿನ ವಿಚಾರಗಳನ್ನು ಮರೆಯಬೇಕೆನ್ನಿಸಿದಾಗ ಒಂದು ಸಂಸ್ಕೃತ ಶ್ಲೋಕವನ್ನು ಗೊಣಗುಟ್ಟುವುದು. ಅದರಲ್ಲೂ ಒಳಗಿನ ವಿಚಾರಗಳನ್ನು ಹತ್ತಿಕ್ಕಿ ಹಿಮ್ಮೆಟ್ಟಿಸಬೇಕೆಂದಿದ್ದಾಗ ಕಾಲಿದಾಸನ ಒಂದು ಶ್ಲೋಕವನ್ನು-ಅದೊಂದನ್ನೆ – ಮೇಲಿಂದ ಮೇಲೆ ಗೊಣಗುಟ್ಟುವನು. ಈಗ ಅದೇ ಶ್ಲೋಕವನ್ನು ಗುಂಯ್ಗುಡಿಸುತ್ತಿದ್ದಾನೆ!

'ಕಾರ್ಯಾ ಸೈಕತ-ಲೀನ-ಹಂಸ-ಮಿಥುನಾ ಸ್ರೋತೋವಹಾ ಮಾಲಿನೀ
ಪಾದಾಸ್ತಾಮಭಿತೋ ನಿಷಣ್ಣಹರಿಣಾ ಗೌರೀಗುರೋಃ ಪಾವನಾಃ ।
ಶಾಖಾಲಂಬಿತ ವಲ್ಕಲಸ್ಯ ಚ ತರೋರ್ನಿರ್ಮಾತುಮಿಚ್ಛಾಮ್ಯಧಃ
ಶೃಂಗೇ ಕೃಷ್ಣಮೃಗಸ್ಯ ವಾಮನಯನಾಂ ಕಂಡೂಯಮಾನಾಂ ಮೃಗೀಂ ॥'

ಆ ಶ್ಲೋಕದ ವಾತಾವರಣವೆ ಶಾಂತವಿದೆ ಎಂದು ಎಂದಿನಿಂದಲೂ ಅವನದೊಂದು ಭಾವನೆ. ಮಾಲಿನೀ ತೀರದ ಮಳಲು; ಹಂಸ-ಹಂಸೀ; ಈಶ್ವರನ ಹೆಜ್ಜೆಗಳು ಮೂಡಿವೆ, ಬದಿಗೆ ಒಂದು ಮರ, ಅದಕ್ಕೆ ವಲ್ಕಲಗಳನ್ನು ಒಣಹಾಕಿದೆ, ಆ ಮರದ ಬುಡದಲ್ಲಿ ಒಂದು ಕೃಷ್ಣಮೃಗ; ಅದನ್ನು ನಾಲಗೆಯಿಂದ ಸವರುತ್ತಿದ್ದ ಒಂದು ಮೃಗೀ – ಹೆಣ್ಣು.

ಭಲೆ! ಶಕುಂತಲೆಯ ನೆನಪಿನಿಂದ ನರಳುತ್ತಿದ್ದ ದುಷ್ಯಂತ ಸರಿಯಾದ ಚಿತ್ರವನ್ನು ಚಿತ್ರಿಸುತ್ತಿದ್ದ. ಆ ಶ್ಲೋಕದ ವಾತಾವರಣದಂತೆ, ಅದರ ಅರ್ಥ, ಅಲ್ಲಿಯ ಶಬ್ದ ಯೋಜನೆ ಎಲ್ಲವೂ ಸೌಮ್ಯವಾಗಿದೆ, ಶಾಂತಿಸೂಚಕವಾಗಿದೆ. ಯಾಕೆ? ಗೊತ್ತಿಲ್ಲ. ಅದೇ ಕವಿಯ ಪ್ರತಿಭೆ; ತಟ್ಟನೆ ಮನಸ್ಸಿನ ಮೇಲೆ ಪರಿಣಾಮವನ್ನು ಮಾಡುವುದು.

ತನಗೆ ಈ ಶ್ಲೋಕದ ಪಾಠವನ್ನು ಗೊಣಗುವ ರೂಢಿಯಾದ ಸಂದರ್ಭವೂ ಅಂತಹದೆ, ಅದನ್ನು ತಾನೆಂದಿಗೂ ಮರೆಯುವಂತಿರಲಿಲ್ಲ.

ಅಂದು – ಯಾವಾಗ? 7–8 ವರುಷಗಳ ಮುಂಚಿತವಿರಬಹುದು,

ಆಗ ಒಂದು ದಿನ—ತಾನು ಹೀಗೆಯೆ ಕಿಟಕಿಗೆ ನಿಂತುಕೊಂಡಿದ್ದ ನಿರೀಕ್ಷೆಯಲ್ಲಿ. ಮುಂಚಿನ ದಿನವೊ, ಅದರ ಮುಂಚಿನ ದಿನವೊ – ಈಗ ಸ್ಮರಣೆಯಲ್ಲಿಲ್ಲ, ಆಗ ಅದು ಒಂದು ವರ್ಷದಷ್ಟು ದೀರ್ಘವೆನ್ನಿಸಿತ್ತು – ಕುಮುದ ಮೋಹನನನ್ನು ಕರೆದುಕೊಂಡು ಮನೆಯಿಂದ ಹೊರಬಿದ್ದಿದ್ದಳು. ಆಕೆ ಹೊರಬಿದ್ದಾಗ ತಾನು ಅದೇ ಕಿಟಕಿಗೆ ನಿಂತಿದ್ದ. ಮುಂದೆ ಹಾಗೆಯೆ ಎಷ್ಟು ಗಂಟೆ – ಅಥವಾ ಎಷ್ಟು ದಿನ ನಿಂತಿದ್ದನೊ, ಆಕೆ ಬರಬಹುದೆಂಬ ನಿರೀಕ್ಷೆಯಿಂದ. ಆಕೆ ಬರಲಿಲ್ಲ. ಎಷ್ಟೊ ಸಲ ವಿಚಾರ ಬಂದಿತ್ತು, ತಾನೂ ಹೋಗಿ ನೋಡಿಕೊಂಡು ಬರಬೇಕು ಎಂದು. ಆದರೆ ತಾನು ಹೋದಾಗ ಆಕೆ ಬಂದರೆ – ಎಂಬ ಸಂಶಯದಿಂದ ನಿಂತಲ್ಲಿಯೆ ನಿಂತುಬಿಟ್ಟಿದ್ದ. ಆಕೆ ಬರಲಿಲ್ಲ. ಮತ್ತೆ ತನ್ನ ಸೋದರತ್ತೆಯ ಮನೆಗೆ ಹೋಗಿರಬಹುದು ಎಂದು ಸಮಾಧಾನವನ್ನು ತಂದುಕೊಂಡ. ಒಂದು ರಾತ್ರಿ ಮನೆಯಲ್ಲಿ ದೀಪವಿರಲಿಲ್ಲ, ಎರಡು ದಿನ ತನಗೆ ಊಟವಿದ್ದಿರಲಿಲ್ಲ. ಒಮ್ಮೆ ಎನ್ನಿಸುವುದು, ಹೋಗಿ ಆಕೆಯನ್ನು ಕ್ಷಮೆ ಬೇಡಿ ಕರೆದುಕೊಂಡು ಬರಬೇಕು – ಎಂದು ; ಇನ್ನೊಮ್ಮೆ ಎನ್ನಿಸುವುದು, ಈ ಸಲ ಆಕೆ ಏನು ಮಾಡಿದರೂ ಬರುವುದು ಶಕ್ಯವಿಲ್ಲ – ಎಂದು.

ತಪ್ಪು ತನ್ನದೆ ಎಂದು ಈಗ ಅವನಿಗೆ ತೋರಿತ್ತು. ಯಾವ ಕರಾರಿನ ಮೇಲೆ ಆಕೆ ಬರಲು ಒಪ್ಪಿದ್ದಳೊ ಆ ಕರಾರನ್ನು ಮುರಿಯಲು ತಾನು ಯತ್ನಿಸಿದ್ದು ತಪ್ಪು ಎನ್ನಿಸಿತ್ತು, ಆಕೆ ಹೊರಟುಹೋದ ಮೇಲೆ. ಆದರೆ ಅದಕ್ಕೆ ಮುಂಚಿತ ಎಷ್ಟು ಆತ್ಮವಿಶ್ವಾಸದಿಂದ ತಾನು ಆ ಕರಾರನ್ನು ಮುರಿಯಲು ಸನ್ನದ್ಧನಾಗಿ ಹೊರಟಿದ್ದ !

ಅಂದಿನ ನೆನಪಿಗಾಗಿ ಇಂದು ರಾಮಣ್ಣನಿಗೆ ಮತ್ತೆ ನಗೆ ಬಂದಿತು. ಇಂದು ತನ್ನ ವಯಸ್ಸು 45, ಎಂದರೆ ಆಗ ತಾನು 37–8 ; ಆದರೂ ಒಬ್ಬ ಅವಿವೇಕಿ ಯುವಕನಂತೆ ವರ್ತಿಸಿದ್ದನಲ್ಲ ತಾನು ಆ ದಿನ !

ಕಾಮೀ ಸ್ವತಾಂ ಪಶ್ಯತಿ ! ಇಂತಹ ಅವಿವೇಕಿ ಯುವಕರನ್ನು ನೋಡಿಯೆ ಕಾಲಿದಾಸ ಆ ಮಾತನ್ನು ಹೇಳಿರುವನೊ ಏನೊ ! ಆ ದಿನ, ಮೋಹನನನ್ನು ತಾನು ಎತ್ತಿಕೊಳ್ಳಲು ಹೋದಾಗ, ಕುಮುದಳಿಗೆ ತನ್ನ ಕೈ ತಾಕಿದಾಗ ಆಕೆಯ ಕಣ್ಣುಗಳಲ್ಲಿ ಮೂಡಿದ ಸಂತೃಪ್ತಿಯ ನಗೆಯನ್ನು ಕಂಡು

ತಾನು ಉತ್ಸಾಹಿತನಾಗಿದ್ದನು. ಕೂಡಲೆ ಆಕೆ ಪ್ರತಿಭಟಿಸಿದ್ದಳು, ಆರ್ಭಟಿಸಿದ್ದಳು, ಕೋಣೆಗೆ ಹೋಗಿ ತನ್ನ ಸಾಮಾನುಗಳನ್ನು ಸಾವರಿಸಿ ಇಟ್ಟಳು; ಇನ್ನೂ ಏನು ಮಾಡುವಳೊ ಎಂಬ ಹೆದರಿಕೆಯಿಂದ ತಾನು ಮೆಲ್ಲಗೆ ನಡೆದು ಹೋಗಿ ಅರೆತೆರೆದ ಬಾಗಿಲಿನ ಸಂದಿನಿಂದ ನೋಡಿದ್ದ, ಕುಮುದ ತನ್ನ ಭಾವಪಟದ ಎದುರು ನಿಂತಿದ್ದು ಕಂಡುಬಂದಿತ್ತು. ಯಾರಿಗೆ ಗೊತ್ತು ನೋಡೋಣ, ಅದನ್ನು ಕೆಳಗೆ ಬಿಸಾಡಿ ಕಾಲಿನಿಂದ ತುಳಿಯಲೂಬಹುದು ಎಂದು ಹೆದರಿಕೆಯಿಂದ ತಾನು ನಿರೀಕ್ಷಿಸುತ್ತಿರುವಾಗಲೆ ಆಕೆ ತಟ್ಟನೆ ಅದನ್ನೆತ್ತಿ ಹಣೆಗೆ ಹಚ್ಚಿಕೊಂಡಳು ತನ್ನನ್ನು ನಮಸ್ಕರಿಸುವಂತೆ, ಆಮೇಲೆ–ಆಮೇಲೆ–ಅದನ್ನು ಮುದ್ದಿಸಿದ್ದಳು! ತಾನು ಕಣ್ಣಾರೆ ಕಂಡ ದೃಶ್ಯವದು, ಕಲ್ಪಿಸಿದ್ದಲ್ಲ. ಆ ದೃಶ್ಯವನ್ನು ನೋಡಿದೊಡನೆ ತನಗೆ ಹೊಸ ಚೈತನ್ಯವೆ ಬಂದಂತಾಗಿತ್ತು. ಕುಮುದ ನಿಜವಾಗಿ ತನ್ನನ್ನು ಪ್ರೀತಿಸುತ್ತಿದ್ದಾಳೆ, ಯಾವುದೊ ತಪ್ಪು ಕಲ್ಪನೆಗಾಗಿ ತನ್ನ ಮೇಲೆ ಸಿಟ್ಟಾಗಿದ್ದಾಳೆ, ಆ ತಪ್ಪು ಕಲ್ಪನೆಯನ್ನು ಹೋಗಲಾಡಿಸಬೇಕು – ಎಂದುಕೊಂಡಿದ್ದ.

ಎಂತಹ ಹುಚ್ಚನಾಗಿದ್ದ ಆಗ ತಾನು! ತಪ್ಪು ಕಲ್ಪನೆ ಯಾವುದಿರಬಹುದು ಎಂಬ ಯೋಚನೆಯಲ್ಲಿ ತೊಡಗಿ ಕೊನೆಗೆ ಅದನ್ನು ಹುಡುಕಿ–ತೆಗೆದೆ – ಎಂದು ತಾನೊಬ್ಬ ಬೃಹಸ್ಪತಿಯ ಅಪರಾವತಾರ ಎಂಬಂತೆ ಹೆಮ್ಮೆಯಿಂದ ಬೀಗಿದ್ದ.

ಕಾಮೀ ಸ್ವತಾಂ ಪಶ್ಯತಿ!

ಸರಿ. ಆ ಮಾತಿಗೆ ಸರಿಯಾಗಿ ತಾನು ನಿರ್ಣಯಕ್ಕೆ ಬಂದಿದ್ದ, ಕುಮುದಳ ಸಿಟ್ಟು ತಾನು ಕರಾರನ್ನು ಅಕ್ಷರಶಃ ಪಾಲಿಸಿದ್ದಕ್ಕಾಗಿ ಎಂದು! ತನ್ನನ್ನು ಆಕೆ ಇಷ್ಟೊಂದು ಪ್ರೀತಿಸುತ್ತಿರುವಾಗಲೆ, ತಾನು ಮಾತ್ರ ಯಾವಾಗಲೊ ಒಮ್ಮೆ ಆಕೆ ಸಿಟ್ಟಿನಿಂದ ಹೇಳಿದ ಮಾತನ್ನು ನಂಬಿಕೊಂಡು ಕುಳಿತಿರುವನಲ್ಲ! "ದಾಂಪತ್ಯ" ಜೀವನ ವಯೋಧರ್ಮವಾಗಿದೆ, ಅದರ ಹಂಬಲ ಪಾಪವೂ ಅಲ್ಲ, ಅಹಿತವೂ ಅಲ್ಲ. ಗಂಡು, ಹೆಣ್ಣು ಎಂಬ ಭೇದ ಸೃಷ್ಟಿನಿಯಮದ ಒಂದು ಅನುಕೂಲ. ವಯೋಧರ್ಮಕ್ಕೆ ಈ ಭೇದವಿಲ್ಲ – ಎಂದು ಏನೇನೊ ಬಲ್ಲವನಂತೆ, ತಾನೊಬ್ಬ ಪ್ರತಿ–ವಾತ್ಸ್ಯಾಯನನಂತೆ ತರ್ಕ ಹೂಡಿ ಸಿದ್ಧಾಂತವನ್ನು ತಲುಪಿ ಸನ್ನದ್ಧನಾಗಿದ್ದ.

ಈಗ 7–8 ವರ್ಷಗಳ ತರುವಾಯ ಎನ್ನಿಸುತ್ತಿದೆ, ಅಂದಿನ ತನ್ನ ವಿಚಾರ, ವ್ಯವಹಾರ ಎರಡೂ ನಾಚಿಕೆಗೇಡಿತನದ ಪರಮಾವಧಿಯಾಗಿದ್ದವು ಎಂದು. ಅಂತಹ ನಾಚಿಕೆಗೇಡಿತನಕ್ಕೆ ತಕ್ಕ ಶಿಕ್ಷೆಯಾಗಿತ್ತು. ಬೆಳಗಿನ ವರೆಗೂ ಕುಮುದ ತನ್ನ ಕೋಣೆಯ ಬಾಗಿಲನ್ನೆ ತೆರೆದು ಮಲಗಿದ್ದರೂ ತನಗೆ ಆ ಕಡೆ ಕಣ್ಣೆತ್ತಿ ನೋಡಲು ಕೂಡ ಧೈರ್ಯವಾಗಿರಲಿಲ್ಲ. ಅಂತಹ ಶಿಕ್ಷೆ ಯಾಗಿದ್ದಿತು ಅಂದು ತನಗೆ.

ಆಕೆ ಆ ಮಾತನ್ನು ಹೇಳಬಹುದೆಂದು ತಾನು ಕನಸು – ಮನಸು ಗಳಲ್ಲಿಯೂ ತಿಳಿದಿರಲಿಲ್ಲ. ಆ ಕಲ್ಪನೆ ಇದ್ದಿದ್ದರೆ ತಾನು ಅವಳನ್ನು ಮಾತ ನಾಡಿಸುತ್ತಲೇ ಇರಲಿಲ್ಲ.

ಆದರೇನು ? ಕಾಮೀ ಸ್ವತಾಂ ಪಶ್ಯತಿ ! ಕಾಮಾಂಧನಾದ ತಾನು ಅನುಕೂಲಸಿಂಧುವನ್ನೆ ಈಜಿಕೊಂಡು ಹೋಗಿದ್ದ. ಅದೇ ಉನ್ಮಾದದಲ್ಲಿ ಆಕೆಯನ್ನು ಸಂಬೋಧಿಸಿದ್ದ.

"ಕುಮುದ"

ತನ್ನನ್ನು ಒಮ್ಮೆ ಚಕಿತಳಾಗಿ ನೋಡಿ ಆಕೆ ಒಮ್ಮೆಲೆ ಮುಗುಳ್ನಗೆ ನಕ್ಕಿದ್ದಳು. ಆಗಲೇ ತಿಳಿಯಬೇಕಾಗಿತ್ತು ತನಗೆ. ಆ ಮುಗುಳ್ನಗೆಯಿಂದ ಮುಖ ಸೌಮ್ಯವಾಗಿ ಕಂಡಿರಲಿಲ್ಲ.

"ಕುಮುದ"

"ಒಳಗೆ ಬನ್ನಿ"

"ಕುಮುದಾ, ಕುಮುದಾ, ಆದದ್ದನ್ನು ನೀನು ಮರೆಯುವೆ ಎಂದು ನನಗನಿಸಿತ್ತು. ಹಾಂಗ ಕೇಳಿದರ ನನ್ದೆ ತಪ್ಪು, ನಾನು ಒಪ್ಪಿಕೋತೀನಿ."

"ನಿಮ್ಮಂಥಾ ಪ್ರಗತಿಶೀಲರು ಇದನ್ನ ತಪ್ಪು ಅಂತ ತಿಳೀಬೇಕೆ ?"

"ಆಂ ? ಏನಂದೆ ?"

"ಅಲ್ಲ – ಹಳೇ ವಿಚಾರದವರು ಹಾಂಗ ಅನ್ನಬಹುದು, ಆದರೆ ನೀವು – "

"ಯಾವುದು ? ಏನು ? ಯಾವ ವಿಷಯ ನೀನು ಮಾತಾಡ್ತಾ ಇರೋದು ?"

"ಸೂಳೇರನ್ನ ಮದಿವೆ ಆಗೋದು."

"ಕುಮುದಾ !" ಚಾವಟಿಯ ಹೊಡೆತಕ್ಕೆ ಆಕ್ರೋಶಿಸುವವನಂತೆ ಕೂಗಿದ್ದ.

"ಪ್ರೀತಿಸದೇ ಇದ್ದ ಹೆಂಗಸಿನ ಸಹವಾಸ ಅಂದ್ರೆ ಸೂಳೆಯ ಸಹವಾಸ ಅಂತ ನೀವೇ — "

"ಕುಮುದಾ, ಕುಮುದಾ, ಯಾಕ ದಂಡಿಸತೀ ನನ್ನ ಇಂಥಾ ಮಾತಿನಿಂದ ? ನಿನ್ನನ್ನ ಪ್ರೀತಿಸದೇ ಇದ್ದರೆ ನಿನ್ನ ಮದುವೆಯಾಗತಿದ್ದೆನೆ ನಾ ? ಯಾಕೆ ಇಲ್ಲದ ವಿಚಾರ ತಲೇವಳಗ ತುಂಬಿಕೊಂಡು—"

"ನನಗೇ ಮಗೂ ಬೇಕಾಗಿತ್ತು, ಅದಕ್ಕ ನಿಮ್ಮನ್ನ ನಾ ಜವಾಬ್ದಾರ ಅಂತ ಹಿಡಿಯೋದಿಲ್ಲ, ಈಗಾದರೂ ಸಮಾಧಾನ ಆಯ್ತೊ ?"

"ಕುಮುದಾ, ಕುಮುದಾ, ಯಾವುದೊ ತಪ್ಪು ಕಲ್ಪನೆಯಿಂದ ನೀನು ಏನೇನೊ ಕಲ್ಪಿಸಿಕೊಂಡೀದಿ—"

"ನನ್ನ ಕಲ್ಪನೆ ತಪ್ಪೋದಿಲ್ಲ. ಈಗ ನೀವು ಯಾಕೆ ಬಂದೀರಿ ಅನ್ನೋದರ ಕಲ್ಪನೆ ನನಗಿದೆ, ಅದನ್ನ ತಪ್ಪು ಅಂತೀರಾ ? ಆದರೆ ಒಂದು ಮಾತು. ನಿಮ್ಮ ತೃಪ್ತಿಗೆ ನಾನು ಅಡ್ಡ ಬರೋದಿಲ್ಲ, ಒಂದ್ಮಾತು ನನಗ ಮೊದಲು ತಿಳುಹಿಸಿಕೊಡಿರಿ. ಈಗ ನೀವು ಇಲ್ಲಿ ಬಂದದ್ದು, ನಾ ನಿಮ್ಮ ಮದಿವೇ ಹೆಂಡತಿ ಅನ್ನೋ ಅಧಿಕಾರದಿಂದಲೊ, ಇಲ್ಲಾ ನಾನು ಅಂದ್ರೆ ನಿಮಗೆ ಮೋಹಿತಳಾದ ಒಬ್ಬ ಸ್ವೇಚ್ಛಾಚಾರಿಣಿ ಅಂತಲೊ ? ಯಾವುದನ್ನ ನೀವು ಹೇಳ್ತೀರಿ ಆ ಪಾತ್ರ ಅಭಿನಯಿಸಲಿಕ್ಕೆ ನಾ ಸಿದ್ಧ."

ಆ ಮಾತನ್ನು ನುಡಿದವಳೆ ದೀಪವನ್ನು ಆರಿಸಿಬಿಟ್ಟಿದ್ದಳು. ಅಬ್ಬ ! ಕತ್ತಲೆ ಎನ್ನುವುದು ಎಂತಹ ಭಯಾನಕ ಎಂಬುದು ಆಗ ತಿಳಿದಿತ್ತು ತನಗೆ. ನಿಲ್ಲಲು ಹೆದರಿಕೆ, ಓಡಿಹೋಗಲು ಹೆದರಿಕೆ; ತನ್ನಿಂದ ತಾನು ಓಡಿಹೋಗುವುದು ಶಕ್ಯವಿಲ್ಲ ಎಂಬ ಹತಾಶ ಹೆದರಿಕೆ.

ಮುಂದೆ ಕುಮುದಳು ಮನೆಯಿಂದ ಹೊರಬೀಳುವ ವರೆಗೂ ತಾನು ಅವಳಿಗೆ ಮುಖವನ್ನು ತೋರಿಸಿರಲಿಲ್ಲ.

ನಾನು ತನ್ನನ್ನು ಪ್ರೀತಿಸುವುದಿಲ್ಲ – ಎಂದಿದ್ದಳಲ್ಲ ! ಅದಕ್ಕೆ ತಾನು ಯಾವ ಸಮಾಧಾನವನ್ನು ಕೊಡಬೇಕು ? "ಇಲ್ಲ, ಕುಮುದಾ, ನಿನ್ನನ್ನು ನಾನು ಪ್ರೀತಿಸ್ತೇನೆ" ಎಂದು ಹೇಳಬೇಕೆ ? ಬರೀ ಶಬ್ದಗಳವು. ಆಗಿನ

ಆಕೆಯ ಮನಃಸ್ಥಿತಿಯಲ್ಲಿ ಆಕೆ ಆ ಶಬ್ದಗಳನ್ನು ನಂಬುತ್ತಿರಲೇ ಇಲ್ಲ. ಆಕೆ ನಂಬಲಿ, ಬಿಡಲಿ; ತನ್ನ ವಿಚಾರವೇನು ?

ಕುಮುದಳನ್ನು ತಾನು ಅಂದು ಪ್ರೀತಿಸುತ್ತಿದ್ದನೆ ?

ಇಂದು ಕುಮುದಳನ್ನು ಪ್ರೀತಿಸುತ್ತಿರುವನೆ ?

ರಾಮಣ್ಣ ಉಸಿರ್ಗರೆದ, ಮತ್ತೆ ಕಿಟಕಿಯ ಹೊರಗೆ ನೋಡಿದ, ಮುಖದಲ್ಲಿ ಇಲ್ಲದ ಬೆವರನ್ನೊರಸಿಕೊಂಡ. ಮೆಲ್ಲನೆ ಹೆಜ್ಜೆಗಳನ್ನಿಡುತ್ತ ಕುರ್ಚಿಯ ಮೇಲೆ ಕುಳಿತುಕೊಂಡು ಮುಖವನ್ನೆತ್ತಿ ಎದುರುಗೋಡೆಯನ್ನು ನೋಡಿದ. "ಇಬ್ಬರನ್ನ ಒಂದೇ ಕಾಲಕ್ಕೆ ಪ್ರೀತಿಸೋದು ಪ್ರಾಮಾಣಿಕ ಮತ್ತು ಶಕ್ಯ ಅಂತ ನೀ ಒಪ್ಪಿಕೊಂಡರೆ ನಾನು ಈ ಪ್ರಶ್ನಕ್ಕ ಉತ್ತರ ಕೊಡತೀನಿ, ಸರಲಾ" ಎಂದ ಗೋಡೆಗೆ ತೂಗಬಿದ್ದ ಸರಲೆಯ ಭಾವಪಟವನ್ನು ಸಂಬೋಧಿಸುತ್ತ.

ದಿಟ್ಟಿಸಿ ನೋಡಿದ ಭಾವಪಟವನ್ನು. ಸಿರಾಶೆಯಿಂದ ತಲೆಯನ್ನಲ್ಲಾಡಿಸಿದ.

"ನೀನೂ ಉತ್ತರ ಕೊಡಲೊಲ್ಲೆ."

ಹುಂ — ಎಂದು ಉಸಿರ್ಗರೆದು ವಿಚಾರದಲ್ಲಿ ತೊಡಗಿದವನಂತೆ ಸ್ತಬ್ಧನಾಗಿ ಕುಳಿತ.

"ಶಕ್ಯ ಅದನೊ ಇಲ್ಲೊ ನೀನು ಹೇಳು, ಪ್ರಾಮಾಣಿಕ ಅದನೊ ಇಲ್ಲೊ ನಾನು ಹೇಳ್ತೀನಿ" ಎಂದ ಮತ್ತೊಮ್ಮೆ ಭಾವಪಟವನ್ನು ನೋಡುತ್ತ.

ಪ್ರಾಮಾಣಿಕತೆಯ ಬಗ್ಗೆ ಅವನಿಗೆ ಈಗ ಧೈರ್ಯ ಬಂದಿತ್ತು. ೭–೮ ವರ್ಷಗಳ ಅನುಭವ, ಅನುಭವದ ಜೊತೆಗೆ ಧೈರ್ಯ ಬಂದಿತ್ತು. ಒಂದೇ ಕಾಲಕ್ಕೆ ಇಬ್ಬರನ್ನು "ಪ್ರಾಮಾಣಿಕ"ವಾಗಿ ಪ್ರೀತಿಸಬಹುದು ಎಂದು ಈ ಅನುಭವದಿಂದ ಪಾಠವನ್ನು ಕಲಿತುಕೊಂಡಿದ್ದ ರಾಮಣ್ಣ.

ಕುಮುದಳನ್ನೂ ತಾನು ಪ್ರೀತಿಸುತ್ತಾನೆ ಎಂಬುದರ ಬಗ್ಗೆ ಈಗ ಅವನಿಗೆ ಸಂಶಯ ಉಳಿದಿರಲಿಲ್ಲ. ಆದರೆ ಅದನ್ನು ಯಾರ ಮುಂದೆ ಹೇಳುವುದು ? "ಈಗ ನಿನ್ನಲ್ಲಿ ಪ್ರೀತಿ ಇದೆ" ಎಂದರೆ ಅವಳಿಗೆ ವಿಶ್ವಾಸ ಹುಟ್ಟೀತೆಂಬ ಭರವಸೆ ಇದ್ದಿರಲಿಲ್ಲ. ಇದಲ್ಲದೆ, "ನಿನ್ನನ್ನು ಪ್ರೀತಿಸುತ್ತಿದ್ದೇನೆ" ಎಂದರೆ ಅವಳಿಗೆ ಸಮಾಧಾನವಾಗುವ ಭರವಸೆಯೂ ಇದ್ದಿರಲಿಲ್ಲ. ತನ್ನನ್ನೊಬ್ಬಳನ್ನೆ ಪ್ರೀತಿಸ

ಬೇಕೆಂಬಾಸೆ ಹೆಂಗಸಿಗೆ ಸಹಜವಾಗಿಯೆ ಇರುವಾಗ ಆಕೆಗೆ ಆ ಮಾತಿನಿಂದ ಸಮಾಧಾನವಾಗುವುದು ಹೇಗೆ ?

ಆದರೂ ಕುಮುದಳಲ್ಲಿ ತನ್ನ ಪ್ರೀತಿ—ಇವೆ ಎಂದು ಆಕೆ ಎರಡನೆಯ ಸಲ ಮನೆ ಬಿಟ್ಟು ಹೋಗುವಾಗಲೆ ಅವನಿಗೆ ಹೊಳೆದಂತಾಗಿತ್ತು. ಅಂದು ಕೂಡ ಕಿಟಕಿಯಿಂದ ಹೊರಗೆ ನೋಡುವಾಗ ಹೀಗೆಯೆ " ಏನೂ ಕಾಣುವುದಿಲ್ಲ" ಎಂದೆನ್ನಿಸಿತ್ತು. ಈಗ ಮತ್ತೊಮ್ಮೆ ನೋಡಿದರೆ ಏನೇನೊ ಕಂಡಿತು. ಆಗ ಎಷ್ಟು ಸಲ ನೋಡಿದರೂ ಏನೂ ಕಾಣಿಸುತ್ತಿರಲಿಲ್ಲ; ನಿಜವಾದ ಶೂನ್ಯತೆ ಆವರಿಸಿತ್ತು ಒಳಗೂ ಹೊರಗೂ. ಇಷ್ಟೇ ಅಲ್ಲ, ದಿಟ್ಟಿಸಿ ನೋಡಿದಂತೆ ದೂರದಲ್ಲಿ ಕುಮುದಳೆ ಬರುತ್ತಿರುವಂತೆ ಕಾಣುತ್ತಿತ್ತು. ದೃಷ್ಟಿಯನ್ನು ಕುಮುದಳೆ ತುಂಬಿದಂತಾಗುತ್ತಿತ್ತು ; ದೃಷ್ಟಿಯನ್ನಲ್ಲ, ಮನಸ್ಸನ್ನು ಎನ್ನಬೇಕು, ಯಾಕೆಂದರೆ ಮನಸ್ಸಿನಲ್ಲಿದ್ದರೇನೆ ಕಣ್ಣಿಗೆ ಕಾಣಿಸುವುದು. ಅಂದು ಹಾಗಾದ ಅನುಭವದಿಂದ ತಾನು ಕುಮುದಳನ್ನು ಪ್ರೀತಿಸುತ್ತಿದ್ದಾನೆ ಎಂದು ಮನವರಿಕೆಯಾಗಿತ್ತು. ಸರಲೆಯನ್ನೂ ಪ್ರೀತಿಸುತ್ತಿದ್ದ ತಾನು ಕುಮುದಳನ್ನೂ ಪ್ರೀತಿಸುತ್ತಿರುವನಲ್ಲ ! ಇದು ಆತ್ಮವಂಚನೆಯಾಗಿರಲಿಕ್ಕಿಲ್ಲವಷ್ಟೆ—ಎಂಬ ವಿಚಾರವೂ ನುಳಿದಿತ್ತು.

ಅದು ಆತ್ಮವಂಚನೆಯಾಗಿರಲಿಲ್ಲ. ಒಂದು ಅನುಭವದಿಂದಂತೂ ಅವನಿಗೆ ಪೂರ್ತಿ ಮನವರಿಕೆಯಾಗಿತ್ತು. ಕುಮುದಳ ವಿಯೋಗವನ್ನು ಸಹಿಸುವಾಗ, ಯಾವ ಕಾರಣಕ್ಕಾಗಿಯೊ ಏನೊ, ಹೊಸ ಕಾದಂಬರಿಯೊಂದನ್ನು ಬರೆಯಲು ಪ್ರಾರಂಭಿಸಿದ್ದನು. ಬರೆಯುವಾಗ ಸರಲೆ, ಕುಮುದ ಇಬ್ಬರೂ ತನ್ನ ಹತ್ತಿರದಲ್ಲಿಯೆ ಕುಳಿತಂತೆ ಭಾಸವಾಗುತ್ತಿತ್ತು. ಅವರ ಸಾಮೀಪ್ಯದ ಲಾಭವನ್ನು ಪಡೆಯಬೇಕೆನ್ನುವಂತೆ ಗಂಟೆ ಗಂಟೆ-ಗಟ್ಟಲೆ ಬರೆಯುತ್ತಿದ್ದನು. ಅಂತೂ ಒಂದು ದಿನ ಆ ಕಾದಂಬರಿ ಲೇಖನ ಮುಗಿಯಿತು. ಒಬ್ಬಿಬ್ಬರಿಗೆ ಓದಿ ತೋರಿಸಿದ್ದನು ; ಅವರ ಮೆಚ್ಚುಗೆಯ ಹಟದಿಂದ ಸ್ವಲ್ಪೇ ದಿನಗಳಲ್ಲಿ ಅದು ಮುದ್ರಿತವಾಯಿತು. ಅಬ್ಬ ! ಎಷ್ಟೊಂದು ಹೊಗಳಿದ್ದರು ವಿಮರ್ಶಕರು ! ಆ ದಿನ ಪತ್ರಿಕೆಗಳಲ್ಲಿ ಪ್ರಕಟವಾದ ವಿಮರ್ಶೆಗಳನ್ನು ಓದಿ (ಸಾರ್ವಜನಿಕ ವಾಚನಾಲಯದಲ್ಲಿ) ಮನೆಗೆ ಧಾವಿಸಿದ್ದ. ಬಂದವನೆ,

" ಕುಮುದಾ, ಕುಮುದಾ, ನನ್ನ ಕಾದಂಬರಿಯ ಬಗ್ಗೆ—"

ಎಂದು ಪ್ರಾರಂಭಿಸಿ ಒಮ್ಮೆಲೆ ದಂಗುಪಡೆದವನಂತೆ ನಿಂತುಬಿಟ್ಟಿದ್ದ.

ಕುಮುದ ಎಲ್ಲಿದ್ದಾಳೆ? ಆಕೆ ತನ್ನ ಮನೆ ಬಿಟ್ಟು ಹೋಗಿದ್ದಾಳೆಂಬುದು ಮರೆತಿತ್ತು. ಆದರೂ ತಾನು ತನ್ನ ಸಂತೋಷದಲ್ಲಿ ಭಾಗಿಯಾಗಲು ಕುಮುದಳನ್ನೆ ಯಾಕೆ ಕೂಗಿದ್ದ?

ಆ ಪ್ರಶ್ನಕ್ಕ ಉತ್ತರ, ಕುಮುದಳನ್ನು ತಾನು ಪ್ರೀತಿಸುತ್ತಿದ್ದಾನೆ ಎಂದು.

ರಾಮಣ್ಣನಿಗೆ ಆ ಬಗ್ಗೆ ಮುಂದೆ ಆಶ್ಚರ್ಯವೂ ಎನ್ನಿಸಿರಲಿಲ್ಲ. ಹೆಂಡತಿಯನ್ನೂ ಮಕ್ಕಳನ್ನೂ ನಿಸ್ವಾರ್ಥ ಆತ್ಮೀಯತೆಯಿಂದ ಪ್ರೀತಿಸುತ್ತಿದ್ದರೆ ಇಬ್ಬರು ಹೆಂಡಂದಿರನ್ನು ಹಾಗೆಯೆ ಯಾಕೆ ಪ್ರೀತಿಸಬಾರದು— ಎಂದು ತನ್ನೊಳಗೆ ಚರ್ಚೆಯನ್ನು ನಡೆಸಿಕೊಂಡಿದ್ದ.

ಆ ಚರ್ಚೆಯ ನಿರ್ಣಯ ಎಷ್ಟೋ ಕಾಲದವರೆಗೆ ಆಗಿದ್ದಿರಲಿಲ್ಲ. ಹೆಂಡತಿಯೊಡನೆ ಇರುವ ಶರೀರಸಂಬಂಧದ ದೃಷ್ಟಿಯಿಂದ ಚರ್ಚೆಯಲ್ಲಿ ತೊಡಕು ಎದ್ದಿತ್ತು. ಆದರೆ ಅದು ತಪ್ಪು ಎಂದಿದ್ದ. ಗಂಡಹೆಂಡಿರ ಪ್ರೀತಿ ಹಾಸಿಗೆಯ ಮೇರೆಯಲ್ಲಿ ಎಂದು ತಿಳಿಯುವುದೆ ತಪ್ಪು ಎಂದು ಹಟದಿಂದ ಹೇಳಿಕೊಂಡಿದ್ದ. ಪ್ರೀತಿಯ ಲಕ್ಷಣಗಳೆ ಬೇರೆ. ಪ್ರೀತಿಗೂ ಶರೀರ ಸಂಭೋಗಕ್ಕೂ ಅಷ್ಟು ನಿಕಟಸಂಬಂಧವಿದ್ದಲ್ಲಿ ವೇಶ್ಯೆಯರಿಗಾಗಿ ಸಮಾಜದಲ್ಲಿ ತಿರಸ್ಕಾರ ಭಾವನೆಯೆ ಇರುತ್ತಿದ್ದಿಲ್ಲ ಎಂದುಕೊಂಡಿದ್ದ. ಗಂಡಹೆಂಡಿರ ಸಂಬಂಧದಲ್ಲಿ ಅದು ಮುಖ್ಯವಲ್ಲ ಎನ್ನಬಹುದೆ? ಅದು ಮುಖ್ಯವಲ್ಲದಿದ್ದರೆ ಅನೇಕ ಸಮಾಜಗಳಲ್ಲಿ "ಅದರ" ಅಭಾವ ಇಲ್ಲವೆ ಅತಕ್ಯತ ವಿವಾಹ ವಿಚ್ಛೇದಕ್ಕೆ ಕಾರಣವಾಗುತ್ತಿರಲಿಲ್ಲ. ಹಾಗಾದರೆ—? ಒಂದು ದಿನ ಬಿಟ್ಟಿತ್ತು ರಾಮಣ್ಣನಿಗೆ ಈ ತೊಡಕು. ಶರೀರ ಸಂಭೋಗ ಗಂಡು-ಹೆಣ್ಣುಗಳಿಗ ನಿಸರ್ಗ ಒಪ್ಪಿಸಿದ ಒಂದು ಜವಾಬ್ದಾರಿ, ಒಂದು ಉದ್ದೇಶಕ್ಕಾಗಿ ಹೊರಿಸಿದ ಜವಾಬ್ದಾರಿ. ಆ ಉದ್ದೇಶದ ಅರಿವಿಲ್ಲದಲ್ಲಿ ಅದು ಕೀಳು, ಆ ಉದ್ದೇಶದ ಹೊಣೆ ಎನ್ನಿಸಿದಲ್ಲಿ ಅದು ಸಹಜಧರ್ಮ. ಆ ಉದ್ದೇಶ ಬೇರೆ ಯಾವುದೂ ಅಲ್ಲ, ನಿಸರ್ಗವನ್ನು ನಡೆಯಿಸುವುದು. ಚಿರಂತನ ಯುವತಿ-ಸೃಷ್ಟಿ ಎಂದರೆ; ಮುಪ್ಪು ಇಲ್ಲ, ಸಾವು ಇಲ್ಲ. ಮುಪ್ಪಿನ ಪರೆ

ಉದುರುವಂತೆ, ಸಾವಿನ ಸತ್ಯತೆಯನ್ನು ಅಲ್ಲಗಳೆವಂತೆ ಹಳೆದರಲ್ಲಿ ಹೊಸತನ್ನು ಚಿಗುರಿಸುವುದು. ಆ ಜವಾಬ್ದಾರಿ ಪ್ರಾಣಿಗಳಲ್ಲಿ ಹೆಣ್ಣು-ಗಂಡುಗಳಲ್ಲಿ ಹಂಚಲಾಗಿದೆ. ಅದಕ್ಕಾಗಿ ಕಾಮತೃಪ್ತಿಗೆ ಯಾವ ಹೆಂಗಸೂ ಸಾಕೆನ್ನಿಸಿದರೆ ನಿಸರ್ಗತೃಪ್ತಿಗೆ ಪ್ರೀತಿಯಿಂದ ಮದುವೆಯಾದ ಹೆಂಡತಿಯೆ ಬೇಕು. ಅಂತೂ ಪ್ರೀತಿಗೂ ಕಾಮತೃಪ್ತಿಗೂ ಸಹಜಸಂಬಂಧವಿಲ್ಲ—

ಆದರೆ? ತಾನು ಕುಮುದಳೊಡನೆ ಸಂಬಂಧವನ್ನು ಬೆಳೆಯಿಸಿ ಕೊಂಡುದನ್ನು ನೋಡಿದರೆ—?

ನಿಜ. ಕುಮುದಳು ತನ್ನನ್ನು ಆಕರ್ಷಿಸಿದ್ದು ಕಾಮವಾಸನೆಯ ದೃಷ್ಟಿಯಿಂದ. ಕುಮುದಳನ್ನು ತಾನು ಮದುವೆಯಾದದ್ದು ವ್ಯವಹಾರದ ಅನುಕೂಲದ ದೃಷ್ಟಿಯಿಂದ.

ಅದೆಲ್ಲ ನಿಜವಿದ್ದರೂ ಇಂದು ಎದುರಿಗಿಲ್ಲದೆಯೂ ಕುಮುದ ತನ್ನನ್ನು ಆಕರ್ಷಿಸುತ್ತಿದ್ದಾಳಲ್ಲ? ಆಕೆಯ ಸಹವಾಸವಿದ್ದರೆ ಸಾಕು ತನಗೆ ಸಮಾ-ಧಾನವಿತ್ತಲ್ಲ—ಇಡಿಯ ಒಂದು ವರ್ಷಕ್ಕಿಂತ ಹೆಚ್ಚು ಕಾಲ? ಆಕೆಯ ಸಹವಾಸ, ಆಕೆಯ ಸುಳಿದಾಟ, ಆಕೆಯೊಡನೆ ಮಾತು, ಜಗಳ ಕೂಡ ಆಕೆಯೊಡನೆಯೆ ಸೊಗಸು ಎನ್ನಿಸುವಾಗ ಹಿಂದಿನದನ್ನು ನೆನೆಯಿಸಿ ಪ್ರಯೋಜನವೇನು—ಎಂದುಕೊಂಡಿದ್ದ.

ಕೊನೆಗೆ ಚರ್ಚೆಯನ್ನು ಗೆದ್ದಿದ್ದ—ಎಷ್ಟೊ ತಿಂಗಳಗಳ ಮೇಲೆ.

ಆಗ ಕುಮುದ ಮತ್ತೆ ಮನೆಗೆ ಬಂದಿದ್ದಳು. ಯಾಕೆ? ಯಾವ ವಿಚಾರದಿಂದ? ಆಕೆಯೊಡನೆ ಹೇಗೆ ನಡೆದುಕೊಳ್ಳುವುದು? ಮತ್ತೆ ತನ್ನ ಧೈರ್ಯ ಕುಸಿದಿತ್ತು. ಇಂದಿಗೂ ತನ್ನ ಅವಸ್ಥೆ ಹಾಗೆಯೆ ಇದೆ. ಒಮ್ಮೆ ಆಕೆಯೊಡನೆ ಮನಬಿಚ್ಚಿ ಮಾತನಾಡಿದರೆ, ಒಮ್ಮೆ ಆಕೆಗೆ ಮನವರಿಕೆ ಮಾಡಿ ಕೊಟ್ಟರೆ ತಾನು ಸಂಸಾರವನ್ನು ಗೆದ್ದಂತೆ ಎಂದು ತಿಳಿದುಕೊಂಡಿದ್ದ. ಮಾತನಾಡುವ ಧೈರ್ಯವೆ ಆಗಿರಲಿಲ್ಲ, ಮತ್ತೆ ಮನೆ ಬಿಟ್ಟು ಹೋದರೆ ಹೇಗೆ ಎಂಬ ಹೆದರಿಕೆಯಿಂದ—

ಛಿ! ಈಗ್ಯಾಕೆ ಅದೆಲ್ಲ ವಿಚಾರ? ಇಂದಿನ ಸತ್ಕಾರಸಮಾರಂಭಕ್ಕೆ ಬರುವಳಲ್ಲ? ಅಲ್ಲಿ ನಡೆಯುವುದನ್ನೆಲ್ಲ ನೋಡಿ ಆಕೆಯ ಮನಸ್ಸೂ ಪ್ರಸನ್ನ ವಾಯಿತೆಂದರೆ—

ಕೈಗಡಿಯಾರವನ್ನು ನೋಡಿಕೊಂಡು ಕುರ್ಚಿಯಿಂದೆದ್ದ. ಈಗ ಸಮಾರಂಭಕ್ಕಾಗಿ ಅವಸರ. ಕುಮುದಳೊಡನೆ ಮೋಹನನೂ ಬಂದರೆ ಒಳಿತು, ಆದರೆ ಆ ಹುಡುಗ ಇನ್ನೂ ಮನೆಗೆಯೆ ಬಂದಂತಿಲ್ಲ ಎಂಬ ಸಂಶಯದಿಂದ ಮತ್ತೆ ಕಿಟಕಿಯತ್ತ ನಡೆದ.

## ೧೧

ಬಾಗಿಲಿಗೆ ನಿಂತ ಕುಮುದಳಿಗೆ ಮೋಹನನ ಸುಳಿವೇ ಕಾಣಲೊಲ್ಲದು. ಯಾಕೊ? ಬೆಳಗಿನಿಂದ ಒಂದೂ ಲಕ್ಷಣವೆ ಒಳ್ಳೆಯದಾಗಿಲ್ಲ; ಹಾಗೆ ಕೇಳಿದರೆ ಯಾವುದು ಕೆಟ್ಟುದೂ ಆಗಿಲ್ಲ. ಆದರೂ ಮನಸ್ಸಿನಲ್ಲಿ ಒಂದು ತರದ ಹುರುಹುರು. ಎಲ್ಲಿಯೊ ಯಾವಾಗಲೊ ಎಂದೊ ಏನೊ ಕೆಟ್ಟು ದಾಗಿದೆ, ಇಲ್ಲವೆ ಕೆಟ್ಟುದಾಗುವುದಿದೆ ಎಂಬ ಹೆದರಿಕೆ ಒಳಗೆ ಹುದುಗಿ ಕೊಂಡು ಕುಳಿತು, ಆಗಾಗ ಬರಲೊ ಬ್ಯಾಡೊ ಎನ್ನುವವರಂತೆ ಮೆಲ್ಲನೆ ತಲೆ ಎತ್ತುತ್ತಿದೆ. ಮೋಹನ ಬೇಗ ಬಂದರೆ ಸಾಕು.

ತಾನೊಂದು ಹುಚ್ಚಿ! ಮೋಹನ ಬಂದೇಬರುವ. ಸುಮ್ಮನೆ ಹೆದರಿ ಕೊಂಡಿದ್ದಾಳೆ. ಹುಡುಗರೊಡನೆ ಆಟದಲ್ಲಿ ಮಗ್ನನಾಗಿದ್ದಾನೊ ಏನೊ! ಆದರೂ ಬೇಗ ಬಂದರೆ ಒಳಿತು. ಮೈ ಕೈ ಬಟ್ಟೆ ಎಲ್ಲ ಹೊಲಸು ಮಾಡಿ-ಕೊಂಡು ತಡಮಾಡಿ ಬರುವುದು, ಆಮೇಲೆ "ನಾನೂ ನಿಮ್ಮೊಡನೆ ಬರುವೆ" ಎಂದು ಹಟ ಹಿಡಿಯುವುದು. ಹೋಗಲಿ, ಅಂತಹದೇನಿದೆ? ವೇಳೆಗೆ ಸರಿಯಾಗಿ ಹೋಗಲೇಬೇಕು ಎಂಬ ಹಟವಾದರೂ ಎಲ್ಲಿದೆ? ಸಭೆಯು ಏರ್ಪಾಟಾದದ್ದೆ ತಮ್ಮ ಸಲುವಾಗಿ, ತಮಗಾಗಿಯೆ ಎಲ್ಲ ಕಾರ್ಯಕ್ರಮ—

'ತಮ್ಮ'! 'ತಮಗಾಗಿ'!

ಕುಮುದಳಿಗೆ ಮೋಜೆನ್ನಿಸಿತು, ಅಂದಿನ ಸಮಾರಂಭದ ಸನ್ನಿವೇಶ ದಲ್ಲಿ ತನ್ನನ್ನೂ ಸೇರಿಸಿಕೊಂಡುದಕ್ಕೆ. ಹುಚ್ಚಿ! ತನ್ನದೇನು ಸಂಬಂಧ? ಸಭೆ ಸೇರುವುದು ರಾಮಣ್ಣನನ್ನು ಸತ್ಕರಿಸುವುದಕ್ಕೆ. ತಾನು ಹೋಗುವುದು ರಾಮಣ್ಣನ ಮದುವೆಯ ಹೆಂಡತಿ–ಎಂದು. ಗಂಡನ ಗೌರವ ನೋಡಿ ಅಸೂಯೆ ಆಗಲೆಂದೊ, ಆನಂದವಾಗಲೆಂದೊ, ಈರ್ಷ್ಯೆಯಾಗಲೆಂದೊ

ಹೆಂಡತಿಯನ್ನು ಆಮಂತ್ರಿಸುವ ರೂಢಿ ಇದ್ದಿರಬೇಕು. ಕುಮುದಳಿಗೆ ಇಂತಹ ಸಂದರ್ಭಗಳಲ್ಲಿ ಹಾಜರಿರಲು ಎಂದೂ ಮನಸ್ಸಾಗುತ್ತಿರಲಿಲ್ಲ. ಹೆಂಡಂದಿರಿಗೆ ಸ್ವಾಭಿಮಾನವಿದ್ದರೆ ಅವರು ಇಂತಹ ಆಮಂತ್ರಣಗಳನ್ನು ನಿರಾಕರಿಸಬೇಕು–ಎಂದು ಅವಳು ಹೇಳುತ್ತಿದ್ದಳು. ಗಂಡನ ಸತ್ಕಾರದ ಪ್ರತಿಯೊಂದು ಕ್ಷಣವೂ ಸಭಿಕರು ಅವನ ಹೆಂಡತಿಯನ್ನು ಆಗಾಗ ನೋಡುವರು; ಕೆಲವರು ಮುಗುಳ್ನಗೆ ನಗುವರು, ಕೆಲವರು ಬದಿಯಲ್ಲಿ ಕುಳಿತವರಿಗೆ ಏನನ್ನೋ ಹೇಳುವರು (ತನ್ನ ಸಲುವಾಗಿ), ಹೆಂಗಸರಂತೂ ಮನಃಪೂರ್ವಕ ಅಸಹ್ಯ ಪಡುವರು—ಅಂತೂ ಸಭೆಗೆ ಬರಬಾರದಿತ್ತು ಎನ್ನಿಸುವಂತಾಗುವುದು. ತನಗೆ ಗೊತ್ತಿದ್ದೂ ತಾನು ಇಂದಿನ ಸಭೆಗೆ ಹೋಗಲು ಒಪ್ಪಿದ್ದಾಳೆ! ಯಾಕೆ—ಎಂಬುದು ಗೊತ್ತು ಆಕೆಗೆ. ಸಂಚಾಲಕರು ಒಳ್ಳೇ ಯುಕ್ತಿಯಿಂದ ಒಲಿಸಿಕೊಂಡಿದ್ದರು. "ನಿಮಗೆ ನಮ್ದೊಂದು ಬಿನ್ನಹ.", "ನೀವು ನಮ್ಮ ಮಾತಿಗೆ ಇಲ್ಲ ಅನ್ನಬಾರದು," "ನಿಮ್ಮ ಸತ್ಕಾರ ಅನ್ನೋದು ನಮ್ಮ ಸಮಾಧಾನಕ್ಕ, ಹಾಂಗ ಕೇಳಿದರ ನಮ್ಮನ್ನೆ ಸತ್ಕರಿಸಿಕೊಂಡ್ಹಾಂಗ" ಎಂದು ಮುಂತಾಗಿ "ನೀವು–ನಿಮ್ಮ" ಎಂದು ಇದು ಇಬ್ಬರದೂ ಸತ್ಕಾರ ಎಂಬಂತೆ ಮಾತನಾಡಿದರು. ಇಬ್ಬರದೂ ಅಲ್ಲ ಎಂಬುದು ತನಗೂ ಗೊತ್ತು, ಅವರಿಗೂ ಗೊತ್ತು; ತನ್ನ ಬಗ್ಗೆ ಹೆಚ್ಚೆಂದರೆ ಒಂದು ಮಾತನ್ನು ಅವರು ಹೇಳುವರು, ಅದೆಂದರೆ ತಾನು ರಾಮಣ್ಣನ ಹೆಂಡತಿ–ಎಂಬುದು. ಪಾಪ! ಅವರಿಗೇನು ಗೊತ್ತು?

ಕುಮುದಳಿಗೆ ಕೆಣಕಿದಂತಾಗಿತ್ತು. "ಅವರಿಗೇನು ಗೊತ್ತು, ಒಂದಾನೊಂದು ಕಾಲದಲ್ಲಿ ರಾಮಣ್ಣನ ಸಾಹಿತ್ಯಕ್ಕೆ ತಾನೇ ಪೂರ್ತಿಯಾಗಿ ಪ್ರೇರಕಳಾಗಿದ್ದಳು–ಎಂಬುದು ಅವರಿಗೇನು ಗೊತ್ತು?" ಎಂದುಕೊಂಡಳು. ತಾವು ಬಾಳುವ ಪಶುಜೀವನದ ಅನುಭವದಿಂದ ಮಿಕ್ಕವರ ಜೀವನವೂ ಹಾಗೆಯೆ ಎಂದು ತಿಳಿದುಕೊಂಡರೆ ತಪ್ಪೂ ಅವರದಲ್ಲ. ಕುಮುದಳು ಬಲ್ಲಳು, ಕಲಿತವರ, ಕಲಿಯದವರ, 'ಸುಸಂಸ್ಕೃತ'ರ, 'ಸುಧಾರಿಸಿದ'ವರ ಸಂಸಾರದ ಸ್ವರೂಪವನ್ನು ಬಲ್ಲಳು. ಇಡಿಯ ದಿನ ಗಂಡನಿಗೆ ಕಚೇರಿಯ ಅವಸರ, ನೋಕರಿಯ ವಿಚಾರ, ಬಡತಿಗಳ ಚರ್ಚೆ; ತಿನ್ನುವುದಕ್ಕೆ ಮನೆ, ತಿಂದು ಆನಂದಪಡುವುದಕ್ಕೆ ಹೊಟೆಲ್; ದಣಿದಾಗ ಮಲಗುವುದಕ್ಕೆ ಮನೆ,

ದಣಿದು ಮನರಂಜನೆ ಬೇಕೆಂದರೆ ಸಿನೆಮಾ; ಕಾಮತೃಪ್ತಿಗಾಗಿ ಮನೆ, ಪ್ರೇಮದ ಹಂಬಲವಿದ್ದಲ್ಲಿ ಪಾರ್ಕದೊಳಗಿನ ಪರಸ್ತ್ರೀ. ಇಂತಹ ಗಂಡ ಹೆಂಡಿರ ಸಂಭಾಷಣೆ ಎಂದರೆ ಜಗಳದ ಪೀಠಿಕೆ, ಸಹವಾಸ ಎಂದರೆ ಹಾಸಿಗೆಯಲ್ಲಿ; ಎಷ್ಟೋ ಸಲ ಮನೆಯಲ್ಲಿಯೆ ದುಡಿಯುವುದಕ್ಕಾಗಿ, ಗಂಡನ ಅಲಕ್ಷ್ಯಕ್ಕಾಗಿ ಮಕ್ಕಳನ್ನು ಹಡೆಯುವುದಕ್ಕಾಗಿ ಮದಿವೆಯಲ್ಲಿ ಗಂಡನೆದುರು ಚಿಕ್ಕ ಹುಡುಗೆಯಾಗಿದ್ದ ಹೆಂಡತಿ ಈಗ ಗಂಡನ ಬದಿಯಲ್ಲಿ ಅವನ ಅಕ್ಕನಂತೆಯೊ ತಾಯಿಯಂತೆಯೊ ಕಾಣುವುದು. ಕಲಿಯಲಿ ಕಲಿಯದಿರಲಿ, ಹೆಂಗಸರ ಹಣೆಬರೆಹ ಇದು. ಹಾಗೆ ಕೇಳಿದರೆ, ಅಶಿಕ್ಷಿತ ಹೆಂಗಸರೇ ಸುಖಿಗಳು; ದುಡಿಯುವರು, ಸ್ವಂತಕ್ಕಾಗಿ ಗಳಿಸುವರು, ತಮಗೆ ಇಷ್ಟವೆನ್ನಿಸಿದ ಗಂಡಸಿನೊಡನೆ ಬಾಳುವರು.

ಕುಮುದಳಿಗೆ ಒಮ್ಮೆಲೆ ನಗೆ ಬಂದಿತು, ರಾಮಣ್ಣನ ಒಂದು ಮಾತಿಗಾಗಿ. ಇದೇ ವಿಷಯದ ಚರ್ಚೆ ನಡೆದಾಗ ರಾಮಣ್ಣ ಆವೇಶದಿಂದ ನುಡಿದಿದ್ದ, "ತಮ್ಮ ವ್ಯಕ್ತಿತ್ವವನ್ನು ತೋರಿಸುವಷ್ಟು ಗಂಡಸುತನ ಬೇಕು ಹೆಂಗ್ಸಿಗೆ" ಎಂದಿದ್ದ. ಆ ಮಾತಿಗೆ ತಾನು ಗಟ್ಟಿಯಾಗಿ ನಕ್ಕಿದ್ದಳು, ಒಂದು ನಿಮಿಷ ರಾಮಣ್ಣನಿಗೆ ತಿಳಿದಿರಲಿಲ್ಲ, ಆ ಮೇಲೆ ಅವನಿಗೂ ಹೊಳೆಯಿತು, ಇಬ್ಬರೂ ಹೊಟ್ಟೆ ಹುಣ್ಣಾಗುವಷ್ಟು ನಕ್ಕಿದ್ದರು.

ಕುಮುದ ಉಸುರ್ಗರೆದಳು. ರಾಮಣ್ಣನೊಡನೆ ಅಷ್ಟೊಂದು ಆತ್ಮೀಯತೆಯಿಂದ ತಾನು ನಡೆಯುತ್ತಿದ್ದ ಒಂದು ಕಾಲ ಇದ್ದಿತು – ಎಂಬ ವಿಚಾರದಿಂದ ಸಮಾಧಾನ ಹೊಂದಿದವಳಂತೆ ಉಸುರ್ಗರೆದಳು.

ಅದೆಂತಹ ಆತ್ಮೀಯತೆ! ದೇಹ ಎರಡು ಎಂಬುದರ ಅರಿವೂ ತಮಗಿರುತ್ತಿದ್ದಿಲ್ಲ. ಒಮ್ಮೊಮ್ಮೆ ಆ ವಿಚಾರದಿಂದ ಹೆದರಕೆಯಾಗುತ್ತಿತ್ತು. ಒಮ್ಮೆಯಂತೂ—ಕುಮುದಳು ಈಗಲೂ ನಡುಗಿದಳು ನೆನಪಿನಿಂದ.

ಮೋಹನನನ್ನು ಇನ್ನೂ ಹೊಟ್ಟೆಯಲ್ಲಿ ತಳೆದಾಗ. ತನಗಾದುದು ಹೊಸತೇನೂ ಅಲ್ಲ ಎಂಬುದು ತಿಳಿದಿದ್ದರೂ ಆಕೆಗೆ ಒಂದು ತರದ ಅಧೈರ್ಯವಿದ್ದಿತು. ಹೆಣ್ಣಿಗೆ ಅದು ಸಹಜವಾದುದು, ಹೆಣ್ಣಿನ ಸಫಲತೆಯೆ ಹೆರಿಗೆಯಿಂದ ಎಂದು ಮುಂತಾಗಿ ಹೇಳಿ ರಾಮಣ್ಣ ತನಗೆ ಧೈರ್ಯವನ್ನು ಕೊಡುತ್ತಿದ್ದ. ಆದರೂ ಹೆದರಿಕೆ. ಯಾಕಾಗಬಾರದು? ಹೊರಗಿನಿಂದ

ಒಂದು ಕಸದ ಕಣ, ಒಂದು ಮುಳ್ಳಿನ ತುದಿ ಶರೀರದಲ್ಲಿ ಸೇರಿಕೊಂಡಲ್ಲಿ ಶರೀರಕ್ಕೆ ಎಷ್ಟೊಂದು ಅಪಥ್ಯವಾಗುವುದು! ಇದಂತೂ—ಇದು ಏನೊ ಯಾವುದೊ! ಕುಮುದಳಿಗೆ ಮೊದಲು ಆ ಹೆದರಿಕೆ. ಹೆಣ್ಣೊ ಗಂಡೊ ಎಂಬ ಹೆದರಿಕೆಯಲ್ಲ, ಯಾವುದಾದರೊಂದು ನಿಶ್ಚಿತರೂಪವನ್ನಾದರೂ ತಾಳುವುದೆ–ಎಂಬ ಹೆದರಿಕೆ. ಅದಕ್ಕೂ ಮುಂಚಿತ ಇನ್ನೂ ಒಂದು ಹೆದರಿಕೆ. ತನ್ನದೆ ಕ್ಷೇಮ ಸುರಕ್ಷಿತವಾಗಿದೆ ಎಂದು ಹೇಗೆ ಹೇಳಬಹುದು ? ಏನಾದರೂ ಹೆಚ್ಚು ಕಡಿಮೆಯಾಗಿ ತನ್ನ ಆಯುಷ್ಯಕ್ಕೆ ಧಕ್ಕೆ ತಗುಲಿದರೆ ? ಈ ವಿಚಾರ ದಿಂದ ಮೊದಮೊದಲು ಆಕೆಗೆ ತನ್ನ ಬಸಿರಿಗಾಗಿ ಅಸಮಾಧಾನವಾಗಿದ್ದಿತು, ಯಾವುದೋ ಒಂದು ಅನಿಶ್ಚಿತ ಸಿಟ್ಟು ಇದ್ದಿತು, ಒಮ್ಮೊಮ್ಮೆ ಮನಸ್ಸಿನಲ್ಲಿ ರಾಮಣ್ಣನನ್ನು ದೂಷಿಸುವಳು; ಯಾರ ಹೊಣೆ, ಯಾರು ಭೋಗಿಸಬೇಕು? ಹೆಣ್ಣಿಗೆ ಇದೊಂದು ಅನ್ಯಾಯ ಎಂದುಕೊಳ್ಳುವಳು. ತನಗೆ ಯಾವಾಗಲೂ ಆ ಚಿಂತೆಯೆ ಇದ್ದರೆ ರಾಮಣ್ಣನಿಗೆ ತಪ್ಪಿ ಕೂಡ ಅದರ ವಿಚಾರವಿದ್ದಿರಲಿಲ್ಲ-ವಲ್ಲ? ಏನೂ ಆಗಿಯೆ ಇಲ್ಲ ಎನ್ನುವಂತೆ ಎಂದಿನಂತೆಯೆ ವ್ಯಸಹರಿಸುತ್ತಿರು ವನಲ್ಲ—ಎಂದುಕೊಳ್ಳುವಳು. ಮಲಗಿದಾಗ, ಇಂತಹ ವಿಚಾರಗಳಿಂದ ನಿದ್ದೆ ಬಾರದಿದ್ದಾಗ ರಾಮಣ್ಣನ ಮೇಲೆ ಮನಸ್ಸಿನೊಳಗಿದ್ದ ಸಿಟ್ಟನ್ನು ವ್ಯಕ್ತ ಪಡಿಸಲು ಒಮ್ಮೆಲೆ ಅವನ ಕಡೆ ಬೆನ್ನುಮಾಡಿ ಮಲಗಿಕೊಳ್ಳುತ್ತಿದ್ದಳು ತಾನು ಎಷ್ಟೊತ್ತು ನಿದ್ದೆ ಬಾರದೆ ಉರುಳಾಡಿದರೂ ರಾಮಣ್ಣ ಗಾಢವಾಗಿ ಮಲಗಿರುತ್ತಿದ್ದ. ಆಗ ಇನ್ನೊಂದು ಹೆದರಿಕೆಯಾಗುವುದು. ರಾಮಣ್ಣನಿಗೆ ತನ್ನ ಬಗ್ಗೆ ಈಗ ಆಸಕ್ತಿ ಇರಲಿಕ್ಕಿಲ್ಲವೆ ? ಬದಲಾಯಿಸುತ್ತಿರುವ ತನ್ನ ಶರೀರ ವನ್ನು ನೋಡಿ ಅವನು ಅಸಹ್ಯ ಪಡುತ್ತಿರಬಹುದೆ ? ತನಗಾಗಿದ್ದ ರಾಮಣ್ಣನ ಪ್ರೇಮದ ಕತೆ ಇಲ್ಲಿಗೇ ಮುಗಿಯಿತೆ ? ಒಮ್ಮೊಮ್ಮೆ ಹೀಗೆ ವಿಚಾರಮಾಡು ತ್ತಿರುವಾಗ ನಿದ್ರೆಯಲ್ಲಿಯೆ ರಾಮಣ್ಣನ ಕೈ ತನ್ನ ಮಗ್ಗುಲ ಮೇಲೆ ಬರುತ್ತಿತ್ತು, ಅವನಿಗೆ ತಿಳಿದೊ ತಿಳಿಯದೆಯೊ ತನ್ನ ಹೊಟ್ಟೆಯ ಮೇಲೆ ತಾಕುತ್ತಿತ್ತು. ಅಂತಹ ಸಮಯಲ್ಲಿ ಚಳಿ ಸೇರಿದಂತೆ ಅವಳ ಮೈ ನಡುಗುತ್ತಿತ್ತು, ಎಲ್ಲ ವಿಚಾರ ತಡೆದಂತಾಗಿ ಮೆಲ್ಲಗೆ ಮಗ್ಗುಲ ಬದಲಾಯಿಸಿ ಮತ್ತೆ ರಾಮಣ್ಣನ ಕಡೆ ಮುಖ ಮಾಡಿ ಮಲಗುತ್ತಿದ್ದಳು, ಅವನ ಮುಖದ ಮೇಲೆ ಕಯ್ಯಾಡಿ ಸುತ್ತಿರುವಾಗಲೆ ತನಗೆ ನಿದ್ರೆ ಬಂದುಬಿಟ್ಟಿರುತ್ತಿತ್ತು.

ನೆನಪಿನಿಂದ ಈಗಲೂ ಕಂಠ ತುಂಬಿಬರುತ್ತಿದ್ದಿತು ಕುಮುದಳಿಗೆ. ಎಂತಹ ತಾದಾತ್ಮ್ಯ ತಮ್ಮಿಬ್ಬರಲ್ಲಿ ? ಯಾರು ತಿಳಿಯಬಲ್ಲರು ಒಂದಾನೊಂದು ಕಾಲದಲ್ಲಿ ತಮ್ಮಿಬ್ಬರಲ್ಲಿ ಅಂತಹ ತಾದಾತ್ಮ್ಯವಿತ್ತೆಂದು ? ಮೋಹನನು ಒಳಗೆ ಬೆಳೆಬೆಳೆದಂತೆ ತನಗೂ ಧೈರ್ಯ ಹೆಚ್ಚಿತ್ತು, ರಾಮಣ್ಣನ ಸಂತೋಷವೂ ಬೆಳೆದಿತ್ತು. ಒಮ್ಮೊಮ್ಮೆ ರಾಮಣ್ಣನ ಮಾತುಕತೆಗಳಿಗಾಗಿ ತನಗೆ ನಗೆ ಬರುತ್ತಿದ್ದಿತು. ತಾನು ಮಾಡಿದ ಕಿಡಿಗೇಡಿತನವನ್ನು ಹೆಮ್ಮೆಯಿಂದ ನೋಡುವ ಎಳೆ ಹುಡುಗನಂತಾಗಿದ್ದನು ಅವನು. "ಹಾಂ, ಏಳಬೇಡ !" "ಎಲೆಲೆ, ಅದನ್ನೆತ್ತಬ್ಯಾಡ !" "ಸುಮ್ಮ ಸುಮ್ಮನೆ ಪಾವಟಗೆ ಹತ್ತಬ್ಯಾಡ !" ಎಂಬ ಅವನ ಹೆದರಿಕೆಯ ಮಾತುಗಳಿಗಾಗಿ ನಗಲೇ ಬೇಕಾಗುತ್ತಿತ್ತು. ಭಾರ ಹೊಟ್ಟೆಯೊಳಗಿನದು, ಹೊರಗಿನಿಂದುದನ್ನು ಎತ್ತಿ ಇಟ್ಟುಕೊಂಡಿದ್ದಲ್ಲ, ಅದಕಾಗಿ ಅದೂ ತನ್ನ ಶರೀರದ ಒಂದು ಅವಯುವದಷ್ಟೆ ಸಹಜವಾಗಿದ್ದಿತು ಎಂಬುದು ಅವನಿಗೆ ಹೇಗೆ ತಿಳಿಯಬೇಕು ? ಗಂಡಸು ಎಂದರೆ ಅನುಭವವಿಲ್ಲದ ಮಗುವಿನಂತೆ ಎಂಬುದು ಆಗ ಹೊಳೆದಿತ್ತು ಆಕೆಗೆ. ಒಂದು ರಾತ್ರಿ, ಯಾವುದೊ ಕಾರಣಕ್ಕಾಗಿ ತಾನು ಅಸ್ವಸ್ಥವೆನ್ನಿಸಿ ತನಗೆ ನಿದ್ರೆ ಬಂದಿರಲಿಲ್ಲ. ಆಗ ದೀಪವನ್ನು ಹಚ್ಚಿ ಹಾಸಿಗೆಯಲ್ಲಿಯೆ ಎದ್ದು ಕುಳಿತಿದ್ದಳು ಮಗ್ಗುಲಲ್ಲಿ ಮಲಗಿದ್ದ ರಾಮಣ್ಣ. ಮುಖದ ಮೇಲೆ ವಿಶ್ರಾಂತಿಯ ಮುಗ್ಧ ಕಳೆ. ಗಾಢ ನಿದ್ರೆಗಾಗಿ ದೇಹ ಗೊಂಬೆಯಂತೆ ನಿಶ್ಚಲವಾಗಿದ್ದಿತು. ಎಡ ಅಂಗೈ ತಲೆಯ ಕೆಳಗಿದ್ದಿತು, ಎಡಮಗ್ಗುಲು ಮಲಗಿದ ಅವನ ಬಲಗೈ ಇನ್ನೂ ತನ್ನ ಮೈ ಮೇಲೆಯ ಇದ್ದಿತು. ತಾನು ಎದ್ದು ಕುಳಿತು ಮೆಲ್ಲನೆ ಆ ಕೈಯನ್ನೆತ್ತಿ ತನ್ನ ತೊಡೆಯಮೇಲಿಟ್ಟುಕೊಂಡಳು, ಎರಡೂ ಕೈಗಳಿಂದ ಹಿಡಿದುಕೊಂಡಳು ; ಬೆಚ್ಚನ್ನ ಆ ಕೈಯಿಂದ ತನಗೂ ಬೆಚ್ಚಗೆನ್ನಿಸಿತ್ತು ; ಎರಡೂ ಕೈಗಳಿಂದ ಆ ಕೈಯನ್ನೆತ್ತಿ ತನ್ನ ಹೊಟ್ಟೆಯ ಮೇಲಿಟ್ಟುಕೊಂಡಿದ್ದಳು ; ಒಂದು ಕ್ಷಣದಲ್ಲಿ ಕಣ್ಣಿಗೆ ಕತ್ತಲೆ ಬಂದಂತಾಗಿತ್ತು; ರಾಮಣ್ಣನ ಕೈ ಹೊಟ್ಟೆಗೆ ತಾಕಿದೊಡನೆಯೆ ಏನೊ ಮಿಂಚಿದಂತಾಗಿತ್ತು , ಎದುರಿಗೆ ಮಲಗಿದ ರಾಮಣ್ಣ ತನ್ನ ಹೊಟ್ಟೆ ಯೊಳಗೆ ಲೀನನಾದಂತಾಯ್ತು , ಗಾಬರಿಗೊಂಡಿದ್ದಳು ; ನಿಜ, ನಿಜ, ರಾಮಣ್ಣನೆ ತನ್ನ ಹೊಟ್ಟೆಯೊಳಗೆ ಮಾಯವಾಗಿದ್ದಾನೆ, ಅದೊ-ಅದೊ- ಹುದುಗಿಕೊಳ್ಳಲು ಯತ್ನಿಸುತ್ತಿದ್ದಾನೆ—ಎಂದು ಗಾಬರಿಗೊಂಡು ಕೈಯನ್ನು

ಗಟ್ಟಿಯಾಗಿ ಹಿಡಿದುಕೊಂಡಿದ್ದಳು ; ರಾಮಣ್ಣ ತಟ್ಟನೆ ಎದ್ದು, "ಏನು ? ಏನಾಯ್ತು, ಕುಮುದಾ " ಎಂದು ಕುಳಿತಿದ್ದ; ಅಷ್ಟರಲ್ಲಿ ತನಗೆ ತಿಳಿದಿತ್ತು ಏನಾಗಿತ್ತೆಂಬುದು ; ಆ ಜ್ಞಾನದಿಂದ ಆನಂದ ಉಕ್ಕೇರಿ ತನ್ನ ಮುಖದಲ್ಲಿ ನಗೆ ತುಂಬಿತ್ತು ; ಒಂದು ಕ್ಷಣ ತನ್ನನ್ನು ದಿಟ್ಟಿಸಿ ನೋಡಿ, ತನ್ನ ಹೊಟ್ಟೆಯ ಮೇಲೆ ಕೈಯನ್ನು ಮತ್ತೊಮ್ಮೆ ಇಟ್ಟು ರಾಮಣ್ಣನೂ ಮುಗುಳ್ನಗೆಯಿಂದ ಮುಖ ಅರಳಿಸಿ, "ಓಹೊ !" ಎಂದಿದ್ದ !

ಅಂದು ಮೊದಲ ಬಾರಿ ಹೊಟ್ಟೆಯೊಳಗಿನ ಹೊಸ ಜೀವ ಸರಿದಾಡಿತ್ತು!

ಅದೇ ನನ್ನ ಮೋಹನ! ಅಲ್ಲ, ನಮ್ಮಿಬ್ಬರ ಮೋಹನ—ಎಂದುಕೊಂಡಳು ಕುಮುದ. ಅಂದಿನಿಂದ ಮೋಹನ, ರಾಮಣ್ಣ ಎರಡೂ ಒಂದೇ ವ್ಯಕ್ತಿ ಎಂದೆನ್ನಿಸಿತ್ತು ಕುಮುದಳಿಗೆ.

ಆ ಮೋಹನನನ್ನು ಒಂದು ದಿನ ಹೊಡೆದಿದ್ದಳಲ್ಲವೆ? ಮೋಹನ, ರಾಮಣ್ಣ ಇಬ್ಬರೂ ತನಗೆ ಒಂದಾಗಿದ್ದರೆ ತಾನು ರಾಮಣ್ಣನನ್ನು ಹೊಡೆದಂತೆಯೆ ಅಲ್ಲವೆ ? ಅದಕಾಗಿಯೆ ಮೋಹನನಿಗೆ ಬಿದ್ದ ಪೆಟ್ಟುಗಳಿಗಾಗಿ ರಾಮಣ್ಣನಿಗೆ ನೋವಾಗಿತ್ತೇನೊ !

ಕುಮುದ ಅತ್ಯಂತ ನಿರಾಸೆಯಿಂದ ಉಸುರ್ಗರೆದಳು. ವರ್ಷಾನುವರ್ಷಗಳ ಮುಂಚಿನ ಎಲ್ಲ ಕಹಿ – ನೆನಪುಗಳನ್ನು ಒಂದೇ ಸಲ ಹೊರದೂಡಬೇಕೆನ್ನುವಂತೆ ದೀರ್ಘವಾಗಿ ಉಸುರ್ಗರೆದಳು.

"ತಿರುಗಿ ಬರೋದೇ ಇಲ್ಲ" ಎಂದು ಹೇಳಿದ್ದು ಆ ದಿನವೆ. ಆದರೂ ತಿರುಗಿ ಬಂದು ಇಂದಿಗೆ ಎಷ್ಟೊ ವರ್ಷಗಳು – ಏನು ಯುಗಗಳೊ ?— ಕಳೆದಿವೆ.

ಅದೂ ಒಂದು ಅನುಭವವೆ—ಎಂದುಕೊಳ್ಳುವಾಗ ಆಕೆಗೆ ಒಮ್ಮೆಲೆ ನಗೆ ಬಂದಿತು, ಎಂತಹ ಅನುಭವ ! ಈಗ ಮೋಜು ಎನ್ನಿಸುತ್ತಿದೆ. ತಾನು ಅಷ್ಟೊಂದು ಅಬ್ಬರದಿಂದ, ಅಷ್ಟೊಂದು ಸಿಟ್ಟನಿಂದ ಮೋಹನನನ್ನು ಕರೆದುಕೊಂಡು ಹೋಗಿದ್ದಳು. ಹೋಗುವುದೆಲ್ಲಿ ? ಮತ್ತೆ ಸೋದರತ್ತೆಯ ಮನೆಗೆಯೆ.

ಬೆಳಗಿನಲ್ಲಿ ಮುಟ್ಟಿದ್ದಳು ಸೋದರತ್ತೆಯ ಮನೆಯನ್ನು. ಒಂದು ಕೈಯಲ್ಲಿ ಮೋಹನ, ಇನ್ನೊಂದು ಕೈಯಲ್ಲಿ ಒಂದು ಚಿಕ್ಕ ಬ್ಯಾಗ್.

ಏನನ್ನೊ ಶ್ಲೋಕಗಳನ್ನು ಗೊಣಗುತ್ತ ಮುದುಕಿ ಅಂಗಳಕ್ಕೆ ನೀರನ್ನು ಸಿಂಪಡಿಸುತ್ತಿದ್ದಳು. ತಾನು ಬಂದದ್ದು ಆಕೆಗೆ ಇನ್ನೂ ಲಕ್ಷ್ಯಕ್ಕೆ ಬಂದಿರಲಿಲ್ಲ.

ಕೊನೆಗೆ "ಅತ್ತೀ" ಎಂದು ಅವಳ ಲಕ್ಷ್ಯವನ್ನು ಸೆಳೆಯಬೇಕಾಯ್ತು.

ಮುದುಕಿ ಒಮ್ಮೆಲೆ ತಿರುಗಿ, ತನ್ನನ್ನು ನೋಡಿ, ವಿಶ್ವಾಸವಾದದ್ದಕ್ಕೊ ಸರಿಯಾಗಿ ಕಾಣದ್ದಕ್ಕೊ ಪಟಪಟ ಕಣ್ಣೆವೆಗಳನ್ನು ಬಡೆದು ಮತ್ತೊಮ್ಮೆ ದಿಟ್ಟಿಸಿ ನೋಡಿ, "ಯಾರು ? ಕುಮುದಿ " ಎಂದಿದ್ದಳು.

"ಇದೇನೆ, ಕುಮುದೀ ? ಹೇಳ್ದೆ ಕೇಳ್ದೆ ಬಂದಿ ? ಒಬ್ಬಾಕೀನೇ ಬಂದೆಯೊ ಏನೊ ?"

ಮಾತನಾಡುತ್ತ ಇಬ್ಬರೂ ಮನೆಯೊಳಕ್ಕೆ ಹೋಗಿದ್ದರು. ಆದೇ ನಿದ್ರೆಯಿಂದೆಚ್ಚೆತ್ತ ಮೋಹನ ಎಲ್ಲಿ ಬಂದೆನೆಂಬುದು ತಿಳಿಯದೆ ತನ್ನನ್ನೊಮ್ಮೆ ಮುದುಕಿಯನ್ನೊಮ್ಮೆ ನೋಡುತ್ತಿದ್ದ ; ಮಾತನಾಡುತ್ತಿರುವಾಗಲೇ ಆತನನ್ನು ತಾನು ಕೆಳಗಿಳಿಸಬೇಕೆಂದಿದ್ದಳೇನೊ, ಹುಡುಗ ತನ್ನನ್ನು ಗಟ್ಟಿಯಾಗಿ ಹಿಡಿದು ಕೊಂಡ, ತಾನು ಹಟದಿಂದ ಕೆಳಗಿಳಿಸಬೇಕೆನ್ನಲು ಒಮ್ಮೆಲೆ ಅಳತೊಡಗಿದ.

"ಯಾಕ ? ಮತ್ತ ಬಸಿರಿ ಏನ್ನೀನು ?"

ಆ ಕ್ಷಣದಲ್ಲಿ ಕುಮುದಳಿಗೆ ಅತ್ತೆಯ ಮಾತು ತಿಳಿದಿರಲೇ ಇಲ್ಲ. ಯಾವ ಸಂದರ್ಭ ? ಯಾವ ಮಾತು ?

"ಏನಂದಿ, ಅತ್ತೀ ?" ಎಂದು ತಾನು ಬೆರಗಾಗಿ ಕೇಳಿದ್ದಳು.

"ಅಲ್ಲ, ಕೂಸು ಅಳ್ತದ, ಅದಕ್ಕ ಕೇಳಿದೆ" ಎಂದಳು ಅತ್ತೆ.

ಅಷ್ಟರಲ್ಲಿ ಮೋಹನನನ್ನು ಎತ್ತಿಕೊಂಡಲ್ಲಿಯೆ ತಾನು ಕುಳಿತುಕೊಂಡಿದ್ದಳು. ಮೋಹನನು ಶಾಂತನಾಗಿದ್ದ.

"ಕೂಸು ಅಳ್ತದ ಅಂದ್ರ ನೀ ಮತ್ತೇನೊ ಕೇಳಿದಾಂಗ ಆಯ್ತು" ಎಂದಿದ್ದಳು ತಾನು.

"ಮತ್ತೇನಿಲ್ಲ ; ಮತ್ತೆ ಬಸಿರಿದ್ದೀಯೇನು ಅಂದೆ."

"ಇಶ್ ! ನನ್ಗೇನು ಹುಚ್ಚು ಹಿಡಿದದ ಏನು, ಅತ್ತೀ ?"

"ವಯಸ್ಸಾದ ಮ್ಯಾಲೆ ಮದಿವೆ ಆಗೋದು. ಹುಚ್ಚೇ ಹಿಡಿಧಾಂಗ ಮತ್ತ."

"ಕೂಸು ಅಳೋದಕೂ ಅದಕೂ ಏನು ಸಂಬಂಧ ?"

"ಮೊದಲಿನ ಕೂಸು ಇನ್ನೂ ಮೈಮ್ಯಾಲಿನ ಹಾಲು ಕುಡಿಯೋವಾಗ ಮತ್ತೊಂದು ಬಸಿರು ನಿಂತರ ಕೂಸು ಹೀಂಗೇ ಕಿರಿಕಿರಿಮಾಡ್ತಾವ."

ಇದೇನು ತತ್ತ್ವಜ್ಞಾನವೊ, ಅನುಭವಜ್ಞಾನವೊ, ಶಾಸ್ತ್ರೀಯ ಜ್ಞಾನವೊ ? ಕುಮುದಳಿಗೆ ತಿಳಿದಿರಲಿಲ್ಲ. ಆಕೆ ನಕ್ಕುಬಿಟ್ಟಿದ್ದಳು.

"ನಗ್ತೀ ಯಾಕ ?"

"ನಿಮ್ಮಾತಿಗೆ ನಗು ಬಂತು, ಅತ್ತೀ."

"ನಗೆ ಬರುವಂಥಾದ್ದೇನದ ? ಮೊನ್ನೆಮೊನ್ನೆ ಗಂಡನ ಕಡೆ ಹೋದಾಕಿ ತಿರುಗಿ ಬಂದಿ, ಅದಕ್ಕ ಕೇಳಿದೆ."

"ಅಂದ್ರ ನನ್ಗೇನು ಎರಡನೇ ಕೆಲಸೇ ಇಲ್ಲೇನು ?" ತಾನು ನಗೆ ಯಿಂದ ಕೇಳಿದ್ದಳು.

"ಮದುವೆ ಆಗಿ ಹಡೆಯೋದು ಒಂದನೇ ಕೆಲಸ, ಮದಿವೆ ಆಗದೇನೆ ಹಡೆಯೋದು ಎರಡನೇ ಕೆಲಸ—ಈಗಿನ ಹುಡುಗೇರಿಗೆ !"

ಅಬ್ಬ ! ಮುದುಕಿ ಅದೆಷ್ಟು ದ್ವೇಷದಿಂದ ಆ ಮಾತನ್ನು ನುಡಿದಿದ್ದಳು !

"ಎಲ್ಲಾರೂ ಹಾಂಗೇ ಇರೋದಿಲ್ಲ, ಅತ್ತೀ. ಕೆಟ್ಟವರು ಈಗಿನ ಕಾಲದಾಗ ಇದ್ಧಾಂಗ ಆಗಿನ ಕಾಲದಾಗೂ ಇದ್ದೇ ಇದ್ದರು."

"ಆಗಿನ ಕಾಲದಾಗ ನಾಚಿಕೆ ಇರ್ತಿತ್ತು, ಭಾಂವೀ ಹಾರಿಕೊಂಡ ಜೀವಾ ಕೊಡ್ತಿದ್ದರು. ಈಗಿನ ಕಾಲದಾಗ ಧೈರ್ಯ ಇಲ್ಲ, ಗಾಬರಿಯಾಗಿ ಮದುವೆ ಮಾಡಿಕೋತಾವ."

"ಯಾಕ, ಅತ್ತೀ ? ನಾನು ಅಷ್ಟು ಕೆಟ್ಟಾಕೆ ಅಂತ—"

"ಅಯ್ಯ, ಹುಚ್ಚೀ ! ಮಾತಿಗೆ ಮಾತು ಬಂದು ಹೇಳಿದ. ನನ್ನ ಮಾತನ್ನ ಹಾಂಗ ಬಹಾಳ ಲಕ್ಷ್ಯಕ್ಕ ತಂದುಕೋಬ್ಯಾಡ."

ಅತ್ತೆ ಈ ಮಾತನ್ನು ಹೇಳುವಾಗಲೆ, ತನಗೆ ಏನಾಯಿತೊ ಏನೊ, ಒಮ್ಮೆಲೆ ಅಳು ತಡೆಯದಂತಾಗಿ ಬಿಕ್ಕಿದಳು.

ಈಗ ನೆನೆದುಕೊಂಡರೆ ನಗೆ ಬರುವಂತಿದೆ, ಆದರೆ ಆಗ ತಾನು ಬಿಕ್ಕುವುದನ್ನು ನೋಡಿ ಮುದುಕಿ ಕಕ್ಕಾವಿಕ್ಕಿಯಾದಳು

"ಅಯ್ಯ! ಕುಮುದಾ, ಕುಮುದೀ ! ಸುಡ್ಲಿ, ನನ್ನ ನಾಲಗೇನೇ

ಕೆಟ್ಟದು. ಮುದುಕೀ ಮಾತು ಏನು ಕೇಳ್ತೀ ? ಅದೇನೊ ಹೇಳ್ತಾರಲ್ಲ, ತನಗ ಇಲ್ಲದ ಕುಂಕುಮ ಇನ್ನೊಬ್ಬರ ಹಣೇ ಮ್ಯಾಲೆ ನೋಡಿ ಏನು ಬಡೀತು ಹಣೆಗೆ ಅಂತ ಕೇಳಿದಿರಂತ ? ಕುಮುದಾ, ನನ್ನಷ್ಟಕ್ಕೇ ನಾ ಕೂತು ಕೂತು ಇಂಥಾ ಪರೀ ಮಾತಾಡ್ಲಿಕ್ಕೆ ಕಲ್ತೀನಿ. ಅಯ್ಯ, ಹುಚ್ಚೀ ! ಉದಂಡ ಆಯುಷ್ಮಂತನಾಗಲಿ ನಿನ್ನ ಗಂಡ, ಇನ್ನೂ ನಾಲ್ಕು ಮಕ್ಕಳನ್ನ ಹಡೆ, ನಾ ಇರೋತನಕ ಇಲ್ಲಿಯೆ ಬಂದೀಯಂತ ಬಾಣಂತಿ-ತನಕ್ಕ—"

ಮುದುಕಿಯ ಮಾತಿಗೆ ಅಳು ಮಾಯವಾಗಿ ನಗೆ ತಡೆಯದಾಯಿತು. ಮುದುಕಿ ರೇಗಿದಳು.

"ಇದೇನ ? ಬೇಕಾದಾಗ ಅಳತೀ, ಬೇಕಾದಾಗ ನಗತೀ ! ನಿನ್ನ ಜೋಡಿ ಮಾತಾದ್ರೂ ಹ್ಯಾಂಗ ಆಡ್ಬೇಕು ?"

"ಇಲ್ಲ, ಅತ್ತೀ, ಅದಕ್ಕಲ್ಲ. ನಾ ಬಸಿರಿಲ್ಲ ಅಂತ ಹೇಳಿದರೂ—" ಕಣ್ಣುಗಳನ್ನೊರೆಸಿಕೊಳ್ಳುತ್ತ ನಗೆಯಿಂದ ಮಾತು ಬಾರದಾಗಿ ತಾನು ಹೇಳ ತೊಡಗಿದ್ದಳು.

"ಈಗಿಲ್ಲದಿದ್ದರ ಇಲ್ಲ. ಮುಂದಿಷ್ಟರೊಳಗೇ ಆದೀತು. ಇನ್ನೂ ಸಣ್ಣಾಕೆ ನೀನು. ಅಂಥಾ ಕಾಳಜಿ ಯಾಕ ಮಾಡ್ತೀ ?"

"ಇಲ್ಲ, ಅತ್ತೀ, ನಾನು ಅಂಥಾ ಕಾಳಜೀನೂ ಮಾಡೋದಿಲ್ಲ, ಅಂಥಾದ್ದು ನನಗ ಆಗೋ ಹಾಂಗೂ ಇಲ್ಲ—"

"ಬರೇ ಬಾಯಿಯಿಂದ ಆಡೋ ಮಾತು—"

"ಅಲ್ಲ, ಅತ್ತೀ, ನಿಜ ಅದು. ಇನ್ನೆಂದಿಗೂ ಇಲ್ಲ."

"ಅಂದ್ರೇನ ?"

"ಅಂದರೇನು ?" ಎಂಬುವುದು ತನಗೂ ತಿಳಿದಿರಲಿಲ್ಲ, ತಾನು ಆ ಬಗ್ಗೆ ವಿಚಾರವನ್ನೂ ಮಾಡಿರಲಿಲ್ಲ. ಆದರೂ ಮನಸ್ಸಿನಲ್ಲಿದ್ದುದೆಲ್ಲವನ್ನು, ಇನ್ನೊಬ್ಬರ ಮುಂದೆ ಹೇಳುವ ಅದೇ ಮೊದಲ ಅವಕಾಶವಾದದ್ದರಿಂದ, ಒಂದೇ ಸಮನೆ ಹೇಳಿದ್ದಳು. ಹೇಳುತ್ತ ಹೇಳುತ್ತ ತನಗೆಯೆ ಅದರಲ್ಲಿ ವಿಶ್ವಾಸವಿಲ್ಲವೆನ್ನಿಸಿತು, ಮುಂದೆ ಮಾತಿನಲ್ಲಿ ಗೊಂದಲವೆದ್ದಿತು, ಮುಂಚೆ ಹೇಳಿದ್ದನ್ನೆ ಮರೆತು ಮತ್ತೊಮ್ಮೆ ಹೇಳಿದಳು, ಮುಂಚೆ ಹೇಳಿದ್ದನ್ನು ನೆನಪಾ

ದೊಡನೆ ಮುಂದೆ ಹೇಳುವುದನ್ನು ಮರೆತಳು, ಕೊನೆಗೆ ತಾನು ಇದಾವುದನ್ನೂ ಹೇಳಲೇಬಾರದಾಗಿತ್ತೇನೊ ಎನ್ನಿಸಿತು, ನಾಲಗೆ ತಡವರಿಸುತ್ತಿತ್ತು—

"ಅಯ್ಯ! ಏನ್ಹೇಳ್ತಾಳೊ ಅಂತ ಮಾಡಿದ್ದೆ! ಗಂಡ - ಹೆಂಡತಿ ಜಗಳಾಡೀರಿ ಅನ್ನಿರಿ" ಎಂದು ದೀರ್ಘವಾಗಿ ಉಸಿರೆಳೆದು ಅತ್ತೆ ನುಡಿದಿದ್ದಳು.

ತಾನು ಹೇಳಿದ್ದು ಯಾವುದೂ ಮುದುಕಿಗೆ ಅರ್ಥವೇ ಆಗಿಲ್ಲ ಎಂದು ತನಗೆ ಸಂತೋಷವಾಗಿತ್ತು, ಅದುವರೆಗೆ ಒಳಗಿನ ವಿಚಾರಗಳನ್ನು ಹೊರಗೆಡು ಹಿದ್ದಕ್ಕೆ ಮನಸ್ಸೂ ಹಗುರಾಗಿತ್ತು.

ಅಥವಾ ಆಕೆಗೆ ಎಲ್ಲವೂ ತಿಳಿದಿತ್ತೊ!

ಅಥವಾ ತನಗೆ ತಿಳಿದಿದೆ ಎಂಬುದೆ ಮುದುಕಿಗೆ ತಿಳಿದಿರಲಿಲ್ಲವೊ?

ಅಂತೂ ತನ್ನನ್ನು ಮತ್ತೆ ರಾಮಣ್ಣನ ಕಡೆ ಹೋಗುವಂತೆ ಒಲಿಸಲು ಕಾರಣಳಾದವಳು ಆ ಮುದುಕಿಯೆ!

....ಸ್ಮೃತಿ ತನ್ನನ್ನು ಎಲ್ಲೆಲ್ಲೊ ಒಯ್ಯುತ್ತಿದೆಯಲ್ಲ? ಇಂದು ಯಾಕೆ ಅಂದಿನ ನೆನಪು?

ಯಾಕೊ? ಅಂದು ಮುದುಕಿ ಹೇಳಿದ ಮಾತು ಮತ್ತೆ ಮತ್ತೆ ಸ್ಮರಣೆಗೆ ಬರುತ್ತಿದೆ ಇಂದು!

ಏನನ್ನೊ ಹೇಳಿದ್ದಳಲ್ಲ? ಮೊದಲು ಅದೊಂದು ಮೋಜು ಎನ್ನಿಸಿ ತಾನು ನಕ್ಕಿದ್ದಳು. ಆಮೇಲೆ ಆ ಮಾತು ತನ್ನನ್ನು ಹಿಡಿದೆತ್ತಿ ನಿಲ್ಲಿಸಿದಂ-ತಾಗಿತ್ತು. ಯಾವ ಸಂದರ್ಭ? ಹಾಂ. ನೆನಪಿಗೆ ಬಂದಿತು. ಆ ಮಾತು ಈ ಮಾತು ನಡೆದಾಗ ಮುದುಕಿ ಒಮ್ಮೆಲೆ ತನಗೆ,

"ನಿನ್ನ ಗಂಡ ಏನ್ಮಾಡ್ತಾನ?" ಎಂದು ಕೇಳಿದ್ದಳು.

"ಪುಸ್ತಕ ಬರೀತಾರ."

"ಅದಲ್ಲ ನಾ ಕೇಳಿದ್ದು. ಹೊಟ್ಟೆ ತುಂಬಿಕೊಳ್ಳಲಿಕ್ಕೆ ಏನ್ಮಾಡ್ತಾನ ಅಂದೆ."

ಕುಮುದಳಿಗೆ ನಗೆ ಬಂದಿತ್ತು. "ಯಾಕ, ಅತ್ತೇ, ಪುಸ್ತಕ ಬರೆದರೆ ಹೊಟ್ಟೆ ತುಂಬೋದಿಲ್ಲೇನು?" ಎಂದು ನಗೆಯಿಂದಲೆ ಕೇಳಿದ್ದಳು.

"ಏನೊ ತಾಯೀ! ನನಗೇನು ತಿಳೀಬೇಕು? ಹೊಲ–ಮನೆ ನೋಡಿ ಕೊಳ್ಳೋದು, ಬಡ್ಡೀ ವ್ಯವಹಾರ ಮಾಡೋದು, ಇಲ್ಲಾ ನೋಕರಿ

ಮಾಡೋದು – ನಂ ಕಾಲದೊಳಗ ಗಂಡಸರು ಮಾಡೋ ಕೆಲಸ ಇಷ್ಟು. ಈಗಿನ ಕಾಲದವರು ಏನೇನೊ ಮಾಡ್ತಾರ."

"ಪುಸ್ತಕ ಬರೆಯೋವವರಿಗೆ ನಾಲ್ಕು – ಮಂದೀವಳಗ ಮಾನ – ಮರ್ಯಾದೆ ಇರ್ತದ, ಅತ್ತೆ."

"ಅದಕ್ಕೇನು ? ಮನುಷ್ಯನ ನಡತೆ ಚಲೋದಿದ್ದರ ಏನ್ಮಾಡಿದರೂ ಮಾನಾ–ಮರ್ಯಾದೆ ಇರ್ತದ....ಹಂ....ಅಂದ್ರ – ಪುಸ್ತಕಾ ಬರೀತಾನ ? ಎಷ್ಟು ಕೊಡ್ತಾರ ತಿಂಗಳಾ ಅವನಿಗೆ ಪುಸ್ತಕಾ ಬರೀಲಿಕ್ಕೆ ?"

"ಅದೇನು ತಿಂಗಳಾ – ತಿಂಗಳಾ ಮಾಡೋ ಕೆಲಸ ಅಂತ ತಿಳಿದೀ ಯೇನು, ಅತ್ತೀ ? ಯಾವಾಗ ಬರೆಯಬೇಕು ಅಂತ ಅನಿಸ್ತದ ಆವಾಗ ಬರೆಯೋದು — "

"ಮತ್ತೆ ? ಉಳಿದ ವ್ಯಾಳ್ಯಾಕ್ಕ ಹೊಟ್ಟೆ ತುಂಬಿಕೊಳ್ಳೋದು ಹ್ಯಾಂಗ ?"

"ಹೊಲ–ಮನೀನೂ ಆದ, ಮನೆತನದಾಗ ನಡೆದು ಬಂದದ್ದು."

"ಅಯ್ಯ! ಹುಚ್ಚೀ ! ಅದನ್ನ ಹೇಳ್ಬಾರ್ದ ಮೊದ್ಲು ? ಅಷ್ಟಿದ್ದರ ಆಯ್ತಲ್ಲ ?....ಮನೀವಳಗ ಮಂದಿ ಭಾಳ ಇದ್ದಾರೇನು ?"

"ಯಾರೂ ಇಲ್ಲ, ಇಷ್ಟು ದಿವಸ ನಾವಿಬ್ಬರೇ "

"ಅಂದ್ರ ? ಈಗ ಅವನನ್ನ ಒಬ್ಬನೇ ಬಿಟ್ಟು ಬಂದೆಯಾ ?"

ತಾನು ಆ ಬಗ್ಗೆ ವಿಚಾರವನ್ನೇ ಮಾಡಿರಲಿಲ್ಲ, ಈಗ ಉತ್ತರವನ್ನೂ ಕೊಡಲಿಲ್ಲ. ಮಾತನಾಡುತ್ತಾಡುತ್ತಾ ಮುದುಕಿ ಒಮ್ಮೆಲೆ ನಕ್ಕಿದ್ದಳು.

"ಯಾಕ, ಅತ್ತೀ ? ಏನ್—"

"ಏನೊ ನೆನಪಾಯ್ತು—"

"ಏನು ? "

"ಏನೇನು ? ಮುದುಕೀ ಕೆಲಸೇನು ? ಮೊದಲಿನದನ್ನ ನೆನಪುಮಾಡಿ ಕೊಂಡು ಮೆಲುಕು ಹಾಕತಾ ಕಾಲ ಕಳೆಯೋದು ?"

"ಆದರೂ ನಕ್ಕೆಯಲ್ಲ, ಅತ್ತೀ ?"

ಕೊನೆಗೆ ಒತ್ತಾಯ ಮಾಡಿ ಅತ್ತೆಯು ನೆನಪಿನ ಕತೆಯನ್ನು ಕೇಳಿ ಕೊಂಡಿದ್ದಳು.

"ಅಲ್ಲ – ನಾನೂ ಒಮ್ಮೆ ನಿನ್ಹಾಂಗೇ ಸಿಟ್ಟಿಗೆ ಬಂದಿದ್ದೆ, ಆಗಿನ ಮೋಜು ನೆನಪಾಯ್ತು—"

"ಅಂದ್ರ – ನನ್ಹಾಂಗ—?"

"ನೋಡು ಕುಮುದೀ, ಗಂಡಸಿನ ಸಿಟ್ಟು ಬ್ಯಾರೆ, ಹೆಂಗಸಿನ ಸಿಟ್ಟು ಬ್ಯಾರೆ."

"ಯಾಕೊ ? ಹೆಂಗಸೂ ಒಂದು ಮನುಷ್ಯ ಪ್ರಾಣೀನೇ ಅಲ್ಲೇನೊ?"

"ಹೌದು. ಆದರೂ ಹೆಂಗಸು ಮನುಷ್ಯ ಅಂತ ಮೀಸೆ ಬರೋದಿಲ್ಲ, ಗಂಡಸು ಮನುಷ್ಯ ಅಂತ ತಾಯಿ ಆಗೋದಿಲ್ಲ. ದೇವರಿಚ್ಛಾ ಏನದನೊ ? ಒಬ್ಬೊಬ್ಬರಿಗೆ ಒಂದೊಂದು ಸ್ವಭಾವ ಕೊಟ್ಟಾನ. ಹೊರಗ ನಾಲ್ಕ ಜನರೊಳಗ ಓಡಾಡೋ ಗಂಡಸು ಸಿಟ್ಟಿಗೆ ಬರ್ತಾನ, ಜಗಳಾಡ್ತಾನ, ಮತ್ತೆ ಮರುದಿವಸ ಅವರ ಜೋಡೀನೆ ವ್ಯವಹಾರ ಮಾಡ್ತಾನ. ಆದರೆ ನಮಗೆ ಅಂಥಾ ವ್ಯವಹಾರಾನೇ ಇಲ್ಲ. ನಾವು ಸಿಟ್ಟಿಗೆ ಬಂದಿವಿ ಅಂದ್ರ ದಿವಸಾನು ದಿವಸ ಅದನ್ನ ಮನಸ್ಸಿನಾಗ ಇಟ್ಗೊಂಡು ಕೂಡ್ತೀವಿ."

"ಅಂತೂ ನೀ ಭಾಳ ಹಟಮಾರಿ ಇದ್ದಿ ಅನ್ನು, ಅತ್ತೆ."

"ಗಂಡಸಿನ ಸಿಟ್ಟು ಮೂಗಿನ ತುದಿಗೆ, ಹೆಂಗ್ಸಿನ ಹಟ ಒಲೆಯ ತುದಿಗೆ."

"ಅಂದ್ರ ? ನೀನು ಅಡಿಗೇನೇ ಮಾಡಲಿಲ್ಲೇನು ?"

"ಅಯ್ಯ ! ನಾಯೇನು ನಿನ್ಹಾಂಗ ಒಬ್ಬಾಕೀನ ಮನೀ ವಳಗ ? ಮನೀ ತುಂಬ ಮಂದಿ. ನಾನು ಅಡಿಗೆ ಮಾಡದಿದ್ದರ ಯಾರದೂ ಹೊಟ್ಟೀ ತಡೀತಿದ್ದಿಲ್ಲ."

"ಅಂದ್ರ ಸಿಟ್ಟಿಗೆ ಬಂದ್ರ ಏನ್ಮಾಡ್ತಿದ್ದಿ ?"

"ಹೆಂಗ್ಸು ಮಾಡೋದೇನು ? ಬ್ಯಾರೆ ಹಾಸಿಗೆ ಹಾಕಿಕೊಂಡು ಮಲಗತಿದ್ದೆ. ಎಷ್ಟು ಮಾತಾಡಿಸಿದರೂ ಮಾತಾಡ್ತಿದ್ದಿಲ್ಲ—" ಒಮ್ಮೆಲೆ ನಕ್ಕಳು.

"ಏನ್ಮೋಜು ನೆನಪಾಯ್ತು, ಅತ್ತೆ ?"

"ಮೋಜಲ್ಲ; ಅದೇ, ನಿನ್ಹಾಂಗ ಅಂದ್ನೆಲ್ಲ ? ನೋಡು, ಕುಮುದೀ, ಒಬ್ಬೊಬ್ಬ ಗಂಡಸನ ಸ್ವಭಾವ ಒಂದೊಂದು ತರಹ. ಆದರೆ ಹೆಂಗ್ಸಿನದು

ಹಾಂಗಲ್ಲ. ಮನೀವಳಗ ದುಡಿಯೋದು, ದುಡಿಯೋದು. ತನ್ನ ಮನೆ ಅಂತ ತಾನು ದುಡಿದರೂ 'ಕೆಲಸ ಭಾಳ ಆಗೇದೇನು?' 'ತಲೆ ನೋವೇನು?' 'ಸಾಕಿನ್ನು ವಿಶ್ರಾಂತಿ ತಗೋ' ಹೀಂಗ ಗಂಡಸು ಏನಾದರೂ ತನ್ನನ್ನು ಕೇಳ್ಬೇಕು ಅಂತ ಅನ್ನಿಸ್ತದ ನಮಗ. ಅವರು ವಿಶ್ರಾಂತಿ ತಗೋ ಅಂದ್ರ ನಾವೇನು ತಕ್ಕೋತಿದ್ವಿಲ್ಲ. ನಂ ಸಲುವಾಗಿ ಕಾಳಜಿ ಮಾಡುವವರು ಇದ್ದಾರಲ್ಲ ಅನ್ನೋದೇ ಸಮಾಧಾನ. ಒಮ್ಮೊಮ್ಮೆ ಗೌರೀ-ಗಂಗೆ ಅಂತ, ಹಬ್ಬ-ಹುಣ್ಣಿಮೆ ಅಂತ ಸೀರೆ-ಸಿಂಗಾರ ಮಾಡಿ-ಕೋತಾಳ. ಆಗ ಗಂಡಸೂ ಅದನ್ನ ನೋಡಲಿ, ಸಂತೋಷಪಡಲಿ ಅಂತ ಆಶೆ. ಆದರೆ ಹೇಳಿದೆನಲ್ಲ? ಒಬ್ಬೊಬ್ಬ ಗಂಡಸಿನದು ಒಂದೊಂದು ತರಹ ಅಂತ. ನಮ್ಮವರಿಗೆ ಇಂತಹದೊಂದೂ ಇರಲಿಲ್ಲ. ಹೆಂಡತಿ ಅನ್ನುವವಳು ಮನೀವಳಗ ಇದ್ದಾಳೊ ಇಲ್ಲೊ ಅನ್ನೋ ಹಾಂಗ ನಡೆದುಕೋತಿದ್ದರು. ಒಮ್ಮೆ ಯಾವುದೋ ಮಾತಿಗೆ ಮಾತು ಬೆಳೆದು ನಮ್ಮಿಬ್ಬರದೂ ಜಗಳ ಆಯ್ತು, ನನಗೂ ಭಾಳ ಸಿಟ್ಟು ಬಂದಿತ್ತು. ಕಡೆಗೆ ನಾ ಹೇಳಿದೆ 'ನಾಲ್ಕು ದಿವಸ ನಾ ತವರ್ಮನೀಗ ಹೋಗ್ತೀನಿ' ಅಂತ. 'ಹೋಗ್ಬೇಕನ್ನಿಸಿದ್ದರ ಹೋಗು' ಅಂದರು. ನಾನೇ ಅವರಿಗೆ ಇಷ್ಟು ಬ್ಯಾಡಾಗೀನಿ ಅಂತ ನನ್ಗೂ ಸಿಟ್ಟು ಬಂತು. ನನ್ನ ತಯ್ಯಾರಿ ಮಾಡಿಕೊಳ್ಳಲಿಕ್ಕೆ ಸುರೂ ಮಾಡಿದೆ, ರಾತ್ರಿ ಗಾಡಿಗೆ ಹೋಗೋದು ಅಂತ."

"ಯಾಕ, ತಡೆದೆ, ಅತ್ತೀ? ಮುಂದೇನಾಯ್ತು?"

ಮುದುಕಿ ಗಟ್ಟಿಯಾಗಿ ನಕ್ಕಳು. ನಗುತ್ತಲೆ ಹೇಳಿದಳು, "ನನ್ನ ಸಿಟ್ಟಿನ ಕತೆ ಅಲ್ಲಿಗೇ ಮುಗೀತು."

"ಅಂದ್ರ?"

"ಅಂದ್ರೇನು? ಅದಕ್ಕೇ ಹೇಳಲಿಲ್ಲೇನು ನಿನಗ ಹೆಂಗಸಿನ ಸಿಟ್ಟು ಬ್ಯಾರೆ ಅಂತ."

"ಅಲ್ಲ, ಅಂದ್ರ, ಏನಾಯ್ತು? ಜಗಳ ಮುಗೀತೇನು? ಏನು ನಿನ್ನವರು ಕ್ಷಮಾ ಬೇಡಿದರೊ?

"ಏನಂದಿ? ಕ್ಷಮಾ ಬೇಡೋದು? ಅಯ್ಯ! ಹುಚ್ಚೀ! ಅದಷ್ಟಕ್ಕೆ ಹೆಂಗ್ಸಿಗೆ ಸಮಾಧಾನ ಇದ್ದರ ಗಂಡಸು ಮಾತಿಗೊಮ್ಮೆ ತಪ್ಪಾಯ್ತು

ಅನ್ನಬಹುದು. ತಂತವ್ರೊಳಗಿನ ಜಗಳ ಮುಗಿಸಲಿಕ್ಕೆ ತಪ್ಪಾಯ್ತು ಅನ್ನೋ ಗಂಡಸಿಗೆ ಆ ಮಾತಿನ ಮಹತ್ವಾನೇ ಇಲ್ಲ."

"ಅಂದ್ರ ನೀ ಯಾಕ ಹೋಗಲಿಲ್ಲ—"

"ನಾ ಹ್ಯಾಂಗ ಹೋಗ್ತೀನಿ, ಕುಮುದೀ? ಅದೇ ನಾ ಹೇಳಿದ್ನಲ್ಲ ನನ್ನ ತಯ್ಯಾರೀ ನಡೆಸಿದೆ ಅಂತ. ಆಗ ಅವರೂ ಸಿಟ್ಟಿನಿಂದ ಹೊರಗ ಹೊರಟಿದ್ದರು. ಆ ಪೆಟ್ಟಿಗೆ ತಗೆದರು, ಈ ಪೆಟ್ಟಿಗೆ ತಗೆದರು, ಹಾಸಿಗೆ ಎತ್ತಿಹಾಕಿದರು; ನನಗೇನನ್ನಿಸ್ತು ತಾವೂ ಹೊಂಟುಹೋಗೋ ಹೆದರಿಕೆ ಹಾಕ್ತಾರೇಳೂ ಅಂತ. ಆದರೆ ಎಲ್ಲಾ ಕಿತ್ತಿಹಾಕಿ 'ಥೂ! ಎಲ್ಲಿ ಅದನೊ ಏನೊ ನನ್ನ ಶರ್ಟು?' ಎಂದು ಸುತ್ತಾಡತೊಡಗಿದರು. ನಾನು ಒಂದ್ಮಾತಿಲ್ಲದೆ ಗೂಟದ ಮ್ಯಾಲಿನ ಶರ್ಟು ತೆಗೆದುಕೊಟ್ಟು ನನ್ನ ತಯ್ಯಾರೀ ವಳಗೇ ತೊಡಗಿದೆ. ಸ್ವಾರೀ ಶರ್ಟು ಹಾಕಿಕೊಂಡು ಇದ್ದ ಕಿಸೇದೊಳಗೆಲ್ಲ ಕೈಹಾಕಿ, ಹುಬ್ಬು ಗಂಟಿಕ್ಕಿ ಆ ಕಡೆ ಈ ಕಡೆ ನೋಡಿ 'ಹಾಳು! ಒಂದು ಸಾಮಾನೂ ಜಾಗೇದಾಗ ಇರೋದಿಲ್ಲ. ನನ್ನ ರೊಕ್ಕ—' ನಾನು ತಟ್ಟನೆ ಹೋಗಿ ತಲೆದಿಂಬಿನ ಕೆಳಗಿನ ಅವರ ರೊಕ್ಕದ ಚೀಲ ತಗದಿಟ್ಟು ಬಂದೆ. ನನ್ನ ಕೆಲಸದೊಳಗ ತೊಡಗಿದೆ. ಸ್ವಲ್ಪ ಹೊತ್ತಿನಲ್ಲಿ ಹೊರಗಿನಿಂದ ಗದ್ದಲ ಕೇಳಿಸ್ತು. ಬಾಗಿಲಿನಿಂದ ನೋಡಿದೆ. ಇವರೂ ಓಡಾಡ್ತಾರ! ಇನ್ನಿಬ್ಬರೂ ಓಡಾಡ್ತಾರೆ! ಯಾಕೊ?–ಅಂತ ಮುಂದ್ಹೋಗಿ ನೋಡಿದರ ಮನೀಮಂದಿ ಎಲ್ಲಾರೂ ಓಡಾಡ್ತಾರ ಇವರ ಕಾಲೊಳಗಿನ ಚಪ್ಪಲಿ ಹುಡುಕಲಿಕ್ಕೆ! ನನಗ ತಡೀಥಾಂಗಾಯ್ತು. ಬಿರಿಬಿರಿ ಹಿತ್ತಲಕ್ಕ ಹೋದೆ, ಅಲ್ಲಿ ಇದ್ದುವು ಅವರ ಚಪ್ಪಲಿ, ಅದನ್ನ ತಂದವಳೆ ಧೊಪ್ ಅಂತ ಒಗೆದು, ಕಾಲ ಅಪ್ಪಳಿಸತಾ ನನ್ನ ಕೋಣೆಗೆ ಹೋಗಿ, ಬಾಗಿಲು ಬಡಿದು ಮುಚ್ಚಿ, ಚಿಲಕಾ ಹಾಕಿ, ಕಟ್ಟಿದ್ದ ನನ್ನ ಹಾಸಿಗೆ ಬಿಚ್ಚಿ ಗೊಳೋ ಅಂತ ಅಳತಾ ಕೂತುಬಿಟ್ಟೆ. ಅತ್ತೆ–ಅತ್ತೆ–ಅತ್ತೆ–ಅಂತೀ, ಕುಮುದೀ—"

ಮುದುಕಿಗೆ ಹೇಳುವಾಗ ನಗೆ ತಡೆಯದಂತಾಗಿತ್ತು.

"ಹೋಗಲಿಕ್ಕೆ ಯಾರು ಬ್ಯಾಡ ಅಂದ್ರು ಅಂತ ಸಣ್ಣ ಹುಡುಗರ್ಹಾಂಗ ಅತ್ತಿ ಏನೊ!"

"ಅಯ್ಯ! ಹೋಗ್ಲಿಕ್ಕೆ ಬ್ಯಾಡ ಅಂತ!" ಮುದುಕಿಗೆ ನಗೆ

ತಡೆಯುತ್ತ, ಕಣ್ಣೊರಸಿಕೊಳ್ಳುತ್ತ ಹೇಳಿದಳು, "ನನಗ ಯಾರು ಬ್ಯಾಡ ಅನ್ನುವವರು? ನಾನು ಅತ್ತದ್ದು ನನ್ನ ಸಲುವಾಗಿ ಅಲ್ಲ, ಅವರ ಸಲುವಾಗಿ—"

"...ವಾಗಿ!"

"...ನು ಇನ್ನೂ ಹೊರಡೋ ತಯಾರಿಯೊಳಗ ಇದ್ದೀನಿ, ಆಗಲೇ ಇಂಥಾ ಅನವ್ಯೋಲಿ (ಅವ್ಯವಸ್ಥೆಯು ತೊಂದರೆ) ಇವರಿಗೆ! ಇನ್ನು ನಾನು ಹೋದ್ಮೇಂದ್ರ ಇವರ್ನ್ನ ನೋಡುವವರು ಯಾರು? ಇವರ ಅಂಗಿ-ದೋತರ ಸಿಗೋದು ಹ್ಯಾಂಗ? ಸ್ವಚ್ಛ ಆದ್ರೂ ಇರ್ತಾವೊ ಇಲ್ಲೋ-ಅಂತ ವಿಚಾರ ಬಂದು ಅತ್ತುಬಿಟ್ಟೆ, ಕುಮುದೀ."

ಕುಮುದಳಿಗೆ ಎಲ್ಲಿಯೋ ಒಂದು ತರದ ನೋವಾದಂತಾಗಿತ್ತು. ಅತ್ತೆ ತನ್ನ ಕತೆಯನ್ನು ಹೇಳುವುದಿಲ್ಲ, ಆದರೆ ತನಗೆ-ಕುಮುದಳಿಗೆ-ಬುದ್ಧಿಯನ್ನು ಹೇಳುತ್ತಿದ್ದಾಳೆ ಎಂದೆನ್ನಿಸಿತು. ತಾನಿಲ್ಲದಾಗ ರಾಮಣ್ಣ ಊಟ ಇಲ್ಲದೆ ಸೊರಗಿದ ಚಿತ್ರ ಆಕೆಯ ಕಣ್ಣೆದುರು ನಿಂತಿತು; ಉತ್ಸಾಹದಿಂದ ಬರೆಯಲು ತೊಡಗುವ ರಾಮಣ್ಣ ತನ್ನ ಪೆನ್ನನ್ನು ಹುಡುಕುತ್ತಲಿದ್ದಾನೆ; ಅವನು ತೊಟ್ಟ ಬಟ್ಟೆ ಮಾಸಿವೆ—ಹೀಗೆ ಏನೇನೊ ಚಿತ್ರಗಳು ಕಣ್ಮುಂದೆ ಹಟದಿಂದ ಬಂದು ನಿಲ್ಲುತ್ತವೆ. ಅತ್ತೆ ಏನನ್ನೊ ಹೇಳುತ್ತಿದ್ದಾಳೆ, ಲಕ್ಷ್ಯವಿಲ್ಲ. ಅತ್ತೆಯ ಮಾತು ಮುಂದೆ ಸಾಗಿದೆ; 'ತಿಳೀತೇನು ಕುಮುದಾ? ಹೊರಗೆ ಏನೇ ಆದ್ರೂ ಮನೀ ವಳಗ ಕೂಸು ಇದ್ಹಾಂಗ ಗಂಡಸು! ಬೆಳೆದ ಹುಡುಗರಿಗೆ ಮನೀ ಬಿಟ್ಟು ಹೊರಗ ಆಡೋ ರೂಢಿ ಹೆಚ್ಚಾದರ ಹಡೆದಾಕೆಗೆ ಮೊದಮೊದಲು ಕೆಟ್ಟ ಅನ್ನಿಸೋದೆ. ನಮಗನ್ನಿಸ್ತದ ನಾವು ಹುಡುಗರನ್ನ ಪ್ರೀತಿಸ್ತೇವಿ, ಹುಡುಗರು ನಮ್ಮನ್ನ ಪ್ರೀತಿಸೋದಿಲ್ಲ ಅಂತ. ಬಾಯ್ಬಿಚ್ಚಿ ಹೇಳೋದಿಲ್ಲ ಹುಡುಗರು, ಆದರೆ ಕಾಲಿಗೆ ಒಂದು ಮುಳ್ಳು ನೆಟ್ಟರೆ ಓಡಿ ನಂಕಡೀನೇ ಬರ್ತಾವ....ಅದಕ್ಕೇ ಹೇಳ್ತೀನಲ್ಲ—ಗಂಡಸು ತನ್ನ ಪ್ರೀತಿ ತೋರಿಸೋ ರೀತೀನೇ ಬ್ಯಾರೇ ಅಂತ....ಯಾಕ? ನನ್ಮಾತಿನ ಕಡೆ ಲಕ್ಷ್ಯ ಇಲ್ಲೇನ? ಇದೇನೆ, ಕುಮುದೀ? ನನ್ನ ಕತೆ ಕೇಳಿ ನೀ ಯಾಕ ಅಳತೀ?"

ತಾನು ಅತ್ತಳು, ಅಳುವು ತಡೆಯದಾಗಿ ಆದರೂ ಜುಳುಜುಳು

ಹರಿಯುವ ಝರಿಯಂತೆ ನಿಧಾನವಾಗಿ ಬರುತ್ತಿದ್ದಿತು. ಮುಂದೆ ಒಂದು ವಾರದಲ್ಲಿ ತಾನು ಮರಳಿ ಮನೆಗೆ ಹೋಗಿದ್ದಳು.

ಮನೆಯಲ್ಲಿ ಕಾಲಿಟ್ಟಾಗ ರಾಮಣ್ಣನು ಮೋಹನನನ್ನೆತ್ತಿ ಮುದ್ದಿಟ್ಟ ದನ್ನು ನೋಡಿ ತನ್ನ ಮೈ ಜುಮ್ಮೆಂದಿತ್ತು.

ತಟ್ಟನೆ ಗಡಿಯಾರವನ್ನು ನೋಡಿಕೊಂಡಳು. ಅಯ್ಯ! ಕರೀಲಿಕ್ಕೆ ಬರೋ ಹೊತ್ತೇ ಆಯ್ತು. ಯಾರಿಗ್ಗೊತ್ತು? "ಮೋಹನಾ, ನೀನೂ ನಡೀ" ಅನ್ನಬಹುದು ರಾಮಣ್ಣ ಹೊರಡೋವಾಗ. ಈ ಹುಡುಗ ಇನ್ನೂ ಬರಲಿಲ್ಲ. ಅವನ ಬಟ್ಟೆಯಾದರೂ ತಯಾರ್ಮಾಡಿ ಇಡ್ತೀನಿ ಎನ್ನುತ್ತ ಕುಮುದ ಆ ಕೆಲಸಕ್ಕೆ ತೊಡಗಿದಳು.

## ೧೨

ರಾಮಣ್ಣ ಕಿಟಕಿಯಲ್ಲಿ ನೋಡುತ್ತಿರುವಂತೆಯೆ ಹಗಲು ಸರಿಯುತ್ತ-ಲಿದೆ, ಬರಲಿರುವ ರಾತ್ರಿಯ ನೆರಳಿನಂತೆ ಕ್ರಮೇಣ ಮುಸುಕು ಮೂಡುತ್ತ ಲಿದೆ. ಹಗಲು-ರಾತ್ರಿ, ಗಂಡ-ಹೆಂಡತಿ, ಇದೊಂದು ಕವಿಗಳ ಸಂಕೇತ. ಅಲ್ಲವೇನೊ-ಎಂದುಕೊಂಡ. ಹಗಲು-ರಾತ್ರಿಗಳ ಸಂಬಂಧ ತನ್ನ ಮತ್ತು ಕುಮುದಳ ಸಂಬಂಧದಂತಿದೆಯಲ್ಲವೆ? ನಡುವೆ ಮಬ್ಬು ಕವಿದಿದೆಯಲ್ಲವೆ? ರಾಮಣ್ಣ ಕಿಟಕಿಯಿಂದ ಹೊರಗೆ ನೋಡಿದ, ಮೋಹನ ಬರಬಹುದು ಎಂದು. ಬಂದರೆ ಒಳಿತು, ಎಂದುಕೊಂಡ; ಅವನನ್ನೂ ಸಭೆಗೆ ಕರೆದು ಕೊಂಡುಹೋದರಾಯಿತು, ಎಂದು ಮತ್ತೊಮ್ಮೆ ಹೇಳಿಕೊಂಡ.

ಕಿಟಕಿಯಿಂದ ನೋಡಿದಲ್ಲಿ ಮೋಹನನ ಸುಳಿವೆ ಇರಲಿಲ್ಲ. ಬರ-ಬಹುದು—ಎನ್ನುತ್ತ ಮತ್ತೆ ಕುರ್ಚಿಯ ಕಡೆ ನಡೆದ. ಮೋಹನ ಹೊರಗಿನಿಂದ ಬರುವ ಎನ್ನುವಾಗ ರಾಮಣ್ಣನ ಕಣ್ಮುಂದೆ ಯಾವಾಗಲೂ ಒಂದೇ ಒಂದು ಚಿತ್ರ ನಿಲ್ಲುವುದು. ಕುರ್ಚಿಯ ಮೇಲೆ ಕುಳಿತು ಕಿಟಕಿಯತ್ತ ನೋಡಿದೊಡನೆ ಮತ್ತೆ ಅದೇ ಚಿತ್ರ ಅವನ ಕಣ್ಣೆದುರು ಬಂದು ನಿಂತಿತು. ಮುಖದಲ್ಲಿ ಆನಂದದ ಕಳೆ ಮೂಡಿತು.

ಎಷ್ಟು ವರ್ಷಗಳ ಹಿಂದಿನ ಚಿತ್ರ! ಆಗಿನಿಂದ ಈಗ ಮೋಹನ ಎಷ್ಟೊಂದು ಬೆಳೆದಿದ್ದಾನೆ! ಆದರೆ ಆ ಚಿತ್ರ ಅಳಿಸುವುದೆ ಇಲ್ಲ. ಏಳೊ ಎಂಟೊ ವರ್ಷಗಳ ಮುಂಚಿನ ಮಾತು ಕುಮುದಳು ಎರಡನೆಯ ಸಲ ತನ್ನ ಮೇಲೆ ಸಿಟ್ಟಾಗಿ ತನ್ನನ್ನು ಬಿಟ್ಟುಹೋಗಿದ್ದಳು. ಆ ಸಮಯವನ್ನು ತಾನು ಹೇಗೆ ಕಳೆದಿದ್ದನೊ! ಆದರೆ ಒಂದು ದಿನ ಬೆಳಿಗ್ಗೆ ಅಕಸ್ಮಾತ್ತಾಗಿ ತಿರುಗಿ ಬಂದಳು; ಆಕೆಯನ್ನು ಯಾವ ರೀತಿ ಸ್ವಾಗತಿಸಬೇಕು ಎಂಬುದರ ಗೊಂದಲದಲ್ಲಿದ್ದಾಗ ಆಕೆ ಎತ್ತಿಕೊಂಡಿದ್ದ ಮೋಹನ ಒಮ್ಮೆಲೆ ತನ್ನನ್ನು ನೋಡಿ ಅತ್ಯಂತ ಹರ್ಷದಿಂದ ಕೂಗಿ ಎರಡೂ ಕೈಗಳನ್ನು ಮುಂದೆ ನೀಡಿದ್ದ. ತಾನೂ ಅವನನ್ನೆತ್ತಿಕೊಳ್ಳಲು ಹೆಜ್ಜೆಯನ್ನೆತ್ತಬೇಕೆಂದು ಒಮ್ಮೆಲೆ ತಟ್ಟನೆ ತಡೆದಿದ್ದ; ಅಷ್ಟರಲ್ಲಿ ಕುಮುದಳೆ ಒಂದೆರಡು ಹೆಜ್ಜೆ ಮುಂದೆ ಬಂದು ಬಾಗಿ ಮೋಹನನನ್ನು ಕೆಳಗಿಳಿಸಿದ್ದಳು, ತಟ್ಟನೆ ಅವನನ್ನು ಎತ್ತಿಕೊಂಡು ಹೊರ ಬೀಳುವ ತನ್ನ ಹೃದಯವನ್ನೆ ಹಿಡಿದುಕೊಳ್ಳುತ್ತಿದ್ದಾನೊ ಎನ್ನುವಷ್ಟು ಬಲವಾಗಿ ಮೋಹನನನ್ನು ಬಿಗಿದಪ್ಪಿ ಒಂದೇ ಸಮನೆ ಮುದ್ದಿಸಿದ್ದ; ಮೋಹನ ಎರಡೂ ಕೈಗಳಿಂದ ತನ್ನ – ರಾಮಣ್ಣನ – ಕಂಠವನ್ನು ಸುತ್ತಿದ್ದ; ಆಗ ಅತ್ಯಂತ ಉಲ್ಲಸಿತನಾಗಿ ಕುಮುದಳನ್ನು ನೋಡಿದ್ದ.

ಅಬ್ಬ! ಅದೆಂತಹ ಚಿತ್ರ! ಶಬ್ದಗಳಿಗೆ ನಿಲುಕದು. ಪ್ರತಿಭೆಯ ಚಿತ್ರ-ಕಾರನೆ ಬೇಕು ಅದನ್ನು ಬಣ್ಣಿಸಲಿಕ್ಕೆ. ಮೋಹನನ ಮುಖದಲ್ಲಿ ಅದೆಂತಹ ಆನಂದದ ಕಳೆ ಇದ್ದಿತು! ಅದಕ್ಕೆಯೆ ಆನಂದ–ರಸ ಎನ್ನುವರೊ ಏನೊ ? ಯಾಕೆಂದರೆ ಆ ಆನಂದದ ಮುಖವನ್ನು ನೋಡಿದವರಿಗೆಲ್ಲ ಆನಂದವಾಗುತ್ತಿತ್ತು; ಆ ಮಗುವಿನಿಂದ ಆನಂದದ ಕಿರಣಗಳೆ ಹೊರ ಸೂಸಿ ಇಡಿಯ ಮನೆಯನ್ನೆ ಆನಂದಮಯವಾಗಿ ಮಾಡಿವೆ ಏನೊ ಎನ್ನುವಂತಿತ್ತು.

ಇನ್ನು ಕುಮುದಳ ಮುಖ! ಅದೊಂದೆ ಸಲ ರಾಮಣ್ಣನಿಗೆ ಕುಮುದಳನ್ನು ನೋಡಿದೊಡನೆ ಬೇರೊಂದು ಭಾವನೆ ಮೂಡಿದ್ದು. ಎಷ್ಟು ಸಲ ಆಕೆಯನ್ನು ನೋಡಿದ್ದನೊ ಅಷ್ಟು ಸಲ ಆಕೆ ತನ್ನ ಹೃದಯವನ್ನು ಸೆಳೆಯುವ ಮೋಹಕ ಹೆಣ್ಣಾಗಿಯೆ ಕಂಡಿದ್ದಳು; ತನಗಾಗಿ ಆಕೆ; ತಾನು ಭೋಗಿ, ಆಕೆ ಭೋಗ್ಯ, ಎಂಬ ವಿಚಾರವೆ ಪ್ರಾಮುಖ್ಯವಾಗಿ ಸುಳಿಯುತ್ತಿತ್ತು. ಆದರೆ ಅದೊಂದು ದಿನದ ಸಂದರ್ಭದಲ್ಲಿ ಕುಮುದಳನ್ನು ನೋಡಿದಾಗ ತನಗೆ ಆಕೆ

ತನ್ನ ಭೋಗ್ಯ ಹೆಣ್ಣು ಎಂಬ ವಿಚಾರವೆ ಬಂದಿರಲಿಲ್ಲ. ಇಷ್ಟೇಕೆ? ಆಕೆ ಹೆಣ್ಣು ಎಂಬ ವಿಚಾರವೆ ಬಂದಿರಲಿಲ್ಲ. ಇಷ್ಟೇಕೆ? ಆಕೆ ಹೆಣ್ಣು ಎಂಬ ವಿಚಾರ ಕೂಡ ಹೊಳೆದಿರಲಿಲ್ಲ. ಅತ್ಯಂತ ಸಂತೃಪ್ತಿಯ ಕಳೆ ಆಕೆಯ ಮುಖದ ಮೇಲೆ; ಮಿಕ್ಕವರ ಆನಂದವನ್ನು ನೋಡಿ ಆನಂದಿಸುವ ಸಾತ್ತ್ವಿಕ ಕಳೆ ಇದ್ದಿತು ಆಕೆಯ ಮುಖದ ಮೇಲೆ, ತನ್ನನ್ನು ತಾನು ಪೂರ್ತಿಯಾಗಿ ಬದಿಗಿಟ್ಟು, ಮರೆತು ಇನ್ನೊಬ್ಬರ ಸುಖಕ್ಕಾಗಿಯೆ ಬಾಳುವ ನಿಸ್ವಾರ್ಥ ಕಳೆ ಇದ್ದಿತು ಆಕೆಯ ಮುಖದ ಮೇಲೆ.

ತಾಯ್ತನದ ಮೂರ್ತಿಯಾಗಿ ಕಂಡಿದ್ದಳು ಅಂದು ಕುಮುದ. ಆ ಮಾತಿಗೆ ಅರ್ಥವಿದೆಯೆ? ತಾನಂತೂ ಅವಳನ್ನು ನೋಡಿದಾಕ್ಷಣ ಅಜ್ಞಾನಿ ಬಾಲಕ ಎಂಬ ಭಾವನೆ ಬಂದಂತಾಗಿತ್ತು. ಆಶ್ಚರ್ಯದ ಮಾತೆಂದರೆ, ಹಿಂದೆ ತಮ್ಮಿಬ್ಬರಲ್ಲಿ ಯಾವ ವೈಮನಸ್ಯವೂ ಉಂಟಾಗಿಲ್ಲವೇನೊ ಎಂಬಂತೆ ನಗೆಮೊಗದಿಂದ ತನ್ನೊಡನೆ ಮಾತನಾಡಿದ್ದಳು!

"ಒಂದು ಸಣ್ಣ ಹುಡುಗ, ಒಂದು ದೊಡ್ಡ ಹುಡುಗ" ಎಂದಿದ್ದಳು ನಗುತ್ತಲೆ.

"ಆಂ?"

"ಅಲ್ಲ, ನಿಮ್ಮಿಬ್ರನ್ನ ನೋಡಿದರ ಯಾರು ಹುಡುಗ ಅಂತ ಹೇಳೋದೆ ಕಠಿಣ ಅಂದೆ."

ಮೋಹನನು, ಆ ಮಾತಿನ ಅರ್ಥವನ್ನು ತಿಳಿದುಕೊಂಡವನಂತೆ, ಕಣ್ಗಳನ್ನರಳಿಸಿ ತನ್ನನ್ನು ನೋಡಿದ್ದ. ಮೋಹನನ ಆ ಅರಳಿದ ಕಣ್ಗಳನ್ನ ನೋಡಿದೊಡನೆಯೆ ಎದೆಯೊಳಗೆ ಎಲ್ಲಿಯೊ ಗುಂಡು ಬಡಿದಂತಾಗಿ, ಕಂಪನಿಯ ನಾಟಕದಲ್ಲಿಯಂತೆ, ದೃಶ್ಯ ತತ್ ಕ್ಷಣ ಬದಲಾಯಿಸಿತ್ತು.

ರಾಮಣ್ಣ ನಿರಾಶೆಯ ನಗೆಮೊಗದಿಂದ ಉಸಿರನ್ನೆಳೆದ. ಕಂಪನಿಯ ನಾಟಕವೇನೊ ನಿಜ ಎನ್ನಬೇಕು; ಯಾವಾಗಲೂ ತನ್ನ ಮತ್ತು ಕುಮುದಳ ನಡುವೆ ಕೃತ್ರಿಮ ವಾತಾವರಣವನ್ನು ಹುಟ್ಟಿಸುತ್ತಿತ್ತು ಅಂತಹ ಸಂದರ್ಭ.

ಮೋಹನನ ಕಣ್ಗಳ ಬಗ್ಗೆ ರಾಮಣ್ಣನಿಗೆ ಈಗಲೂ ಆಶ್ಚರ್ಯವಾಗುತ್ತಿದ್ದಿತು, ಅವನ್ನು ನೋಡಿದೊಡನೆ ಅಧೈರ್ಯ ಉಂಟಾಗುತ್ತಿತ್ತು.

ಆ ಕಣ್ಗಳು ಮೋಹನನ ಕಣ್ಗಳಲ್ಲ, ಸರಳೆಯ ಕಣ್ಗಳು!

ರಾಮಣ್ಣನಿಗೆ ಸಂದೇಹವೇ ಇದ್ದಿರಲಿಲ್ಲ. ಮೋಹನನಗುವಾಗಲಂತೂ ಸರಲೆಯೆ ನಗುಮೊಗದಿಂದ ಮಾತನಾಡುತ್ತಿದ್ದಾಳೇನೊ ಎಂದು ಕ್ಷಣಕಾಲ ಭ್ರಮೆಯಾಗುತ್ತಿತ್ತು ಅವನಿಗೆ, ಎಷ್ಟೋ ಸಲ ಬೆಚ್ಚಿ ಬಿದ್ದಿದ್ದ.

ಮೋಹನನಲ್ಲಿ ಸರಲೆಯ ಕಣ್ಣುಗಳು ಹೇಗೆ? ಮೋಹನ ತನ್ನ ಮತ್ತು ಕುಮುದಳ ಮಗ.

ಅಥವಾ ಆ ಕಣ್ಣುಗಳು ಸರಲೆಯ ಕಣ್ಣುಗಳೆ ಎಂದು ತನಗೆ ಭ್ರಾಂತಿಯೆ?

ಇಲ್ಲವೆ ಸರಲೆಯೆ ಆ ಕಣ್ಣುಗಳ ರೂಪದಲ್ಲಿ ಉಳಿದುಕೊಂಡಿದ್ದಾಳೆಯೆ? ತಾನು ತಾಯಿಯಾಗಲಿಲ್ಲ ಎಂಬ ವಿಚಾರ ಅವಳನ್ನು ಯಾವಾಗಲೂ ಪೀಡಿಸುತ್ತಿತ್ತು; ಮನೆಯಲ್ಲಿ ಮಕ್ಕಳು ಬೇಕು ಎಂದು ಅವಳು ಯಾವಾಗಲೂ ಹಂಬಲಿಸುತ್ತಿದ್ದಳು ತಾನು ಎಷ್ಟೋ ಸಲ ನಗೆಯಾಡಿದ್ದ,

"ಪೇಟೆಯಿಂದ ಕೊಂಡ್ಕೊಂಡು ತರೋಣ, ಈಗಿನ ಕಾಲದಲ್ಲಿ ದುಡ್ಡು ಕೊಟ್ಟರೆ ಏನು ಸಿಕ್ಕಲಿಕ್ಕಿಲ್ಲ?" ಎನ್ನುತ್ತಿದ್ದ.

"ಪ್ಯಾಟೀವಳಗ ಕಾಯಿ–ಪಲ್ಲೆ ಸಿಕ್ಕೇ ಸಿಕ್ತದ ಅಂತ ಮನೀವಳಗ ಕಾಯಿ–ಪಲ್ಲೆ ಹಚ್ಚೋದನ್ನ ಬಿಡೋದಿಲ್ಲ ಯಾರೂ" ಎಂದಿದ್ದಳು ಒಮ್ಮೆ.

"ಸುಮ್ಮನೆ ತ್ರಾಸ ತಕ್ಕೊಳ್ಳೋದು ಹಾಂಗ ಮಾಡೋದಂದರೆ"

"ಅದಕ್ಕೇ ಅದರ ರುಚಿ–ಹೆಚ್ಚು."

"ಹೋಗಲಿ, ಬಿಡು. ಸರಲಾ, ನಾ ಅಂದದ್ದು, ಅಷ್ಟು ಅಗತ್ಯ ಅನ್ನಿಸಿದಾಗ ದತ್ತಕ ತಕ್ಕೊಂಡ್ರಾಯ್ತು ಅಂತ."

"ನಾ ಅನ್ನೋದು, ಮನೀವಳಗೇ ಹುಟ್ಟಿ ಬೆಳೆಯೋ ಮಗು—"

"ನಾನೂ ಬ್ಯಾಡ ಅಂದಿಲ್ಲ, ನೀನೂ ಬ್ಯಾಡ ಅಂದಿಲ್ಲ, ಆದರೂ—"

"ಸಾಕು. ನಾನೇನು ಸಣ್ಣ ಹುಡುಗೆ ಅಂತ ತಿಳಿದೀರೇನು? ನನ್ನಿಂದ ನಿಮಗ ಮಕ್ಕಳ ಸುಖ ಇಲ್ಲ ಅನ್ನೋದು ನನಗೂ ಗೊತ್ತಾಗೇದ."

"ನೀನಿದ್ದರ ನನಗ ಸುಖ. ಹೆಚ್ಚಿಗೆ ಯಾವುದೂ ಬೇಕು ಅಂತ ಅನ್ನಿಸೋದಿಲ್ಲ."

"ನೀವು ಸುಮ್ನೆ ನನ್ನ ಮಾತು ಕೇಳಿರಿ—"

"ಆಜ್ಞೆಯಾಗಲಿ"

"ಇನ್ನೊಂದು ಮದಿವೆ ಮಾಡಿಕೊಳ್ಳಿರಿ."

"ಏನಂದಿ ?"

"ನಾ ಇರೋದ್ರಾಗೇ ಮಾಡಿಕೊಂಡರೆ, ಈ ಮನೀವಳಗೇ ಮಕ್ಕಳು ಹುಟ್ಟಿ ಬೆಳೆಯೋದನ್ನ ಕಾಣ್ತೇನಿ."

"ಆದ್ರೆ ? ಇಂಥಾಕೀನ್ನ ಮದಿವೆ ಆದ್ರ ಮಕ್ಕಳು ಆಗೋದು ಖಂಡಿತ ಅನ್ನೋ ಭರವಸೆ ಒಂದು ಬೇಕಲ್ಲ ? ಏನು, ಇನ್ನೊಮ್ಮೆ ಮೋಸ ಹೋಗೋದು ಬ್ಯಾಡ ಅಂತ ಮಗು ಇದ್ದಾಕೀನ್ನೇ ಮದುವೆ ಆಗಲ್ಯಾ ? ಆಂ ? ಹಹ ;"

"ಸಾಕು, ತಗೀರಿ ! ಏನಾದ್ರೊಂದು ಮಾತಾಡಬ್ಯಾಡಿರಿ !"

ರಾಮಣ್ಣ ಈಗ ಅತ್ಯಂತ ನೊಂದ ಮನಸ್ಸಿನಿಂದ ಹೇಳಿಕೊಂಡ, ಅಂದು ತಾನು "ಏನಾದ್ರೊಂದು" ಮಾತನಾಡಿದ್ದಿಲ್ಲ ಎಂದು. ತನ್ನ ಮಾತೇ ತನಗೆ ಶಾಪವಾದಂತಾಗಿ ಮಗುವನ್ನು ತಳೆದ ಕುಮುದಳನ್ನು ತಾನು ಮದುವೆ ಯಾಗಿದ್ದನಲ್ಲವೆ ? ನಿಜ, ಆ ಮಗುವೇನೊ ತನ್ನದು ನಿಜ, ಆದರೂ—

ರಾಮಣ್ಣ ಈ ವಿಚಾರಕ್ಕಾಗಿಯೆ ಬೆಚ್ಚಿ ಬೀಳುತ್ತಿದ್ದ. ತಾನು ಕಣ್ಣಾರೆ ನೋಡುವೆ ಎಂಬ ಹಟದಿಂದ ಸರಲೆ ಮೋಹನನಲ್ಲಿ ಕಣ್ಣಾಗಿ ಉಳಿದಳೆ ? ನನ್ನ ಮೂರ್ಖತನಕ್ಕಾಗಿ ನಗುತ್ತಿರುವಳೆ ?

ಅಥವಾ—?

ರಾಮಣ್ಣನಿಗೆ ಇನ್ನೊಂದು ಸಂಶಯ ಬರುತ್ತಿದ್ದಿತು. ಕುಮುದಳನ್ನು ಮೆಚ್ಚಿದಾಗೂ ತಾನು ಸರಲೆಯನ್ನೆ ಪ್ರೀತಿಸುತ್ತಿದ್ದನೆ ?

ಮಹಾಭಾರತದಲ್ಲಿ ಕತೆ ಇದೆಯಲ್ಲವೆ ? ವ್ಯಾಸನ ತೇಜಸ್ಸಿಗೆ ಕಣ್ಣು ಮುಚ್ಚಿದ್ದಕ್ಕಾಗಿ ಧೃತರಾಷ್ಟ್ರನ ತಾಯಿ ಕುರುಡ ಮಗುವನ್ನು ಹೆತ್ತಳೆಂದು ? ಪ್ರೇಮಿಗಳ ಹೃದಯದೊಳಗೆ ಹುದುಗಿದ್ದ ವಿಚಾರದ ಪ್ರಭಾವ ಹೀಗೆ ಆ ಪ್ರೇಮ ದಾಟದ ಫಲದ ಮೇಲೆ ಪರಿಣಾಮವನ್ನುಂಟು ಮಾಡುವುದೆ ? ಕುಮುದಳನ್ನು ರತಿಯಲ್ಲಿ ಕೂಡಿದಾಗ ತಾನು ಸರಲೆಯ ರೂಪವನ್ನು ನೆನೆಸಿಕೊಂಡಿದ್ದನೆ ?

ಛಿ ! ಎಂತಹ ಹುಚ್ಚು ವಿಚಾರ ! ಪೂರ್ತಿಯಾಗಿ ಮೈ ಮರೆಯುವ, ಸರ್ವಾತ್ಮನಾ ತಾದಾತ್ಮ್ಯವಾಗಿದ್ದ ರತಿಸಂದರ್ಭದಲ್ಲಿ ಇನ್ನೊಂದು ವಿಚಾರ ಹೃದಯದಲ್ಲಿ ಇರುವುದಾದರೂ ಶಕ್ಯವಿದೆಯೆ ?

ಹಾಗಿದ್ದಲ್ಲಿ ರೈತನು ಹೊಲದಲ್ಲಿ ಬೀಜಗಳನ್ನು ಬಿತ್ತುವಾಗ "ಹೇರಳ-

ವಾಗಿ ಬೆಳೆಯಲಿ" ಎಂಬ ವಿಚಾರವನ್ನು ಮನಸ್ಸಿನಲ್ಲಿಟ್ಟುಕೊಂಡು ಅದನ್ನೆ ಸಾಧಿಸಬಹುದಲ್ಲ ?

ಊಹುಂ. ಹಾಗಾಗದು. ನಿಸರ್ಗಕ್ಕೆ ಅದು ವಿರುದ್ಧ. ಬೀಜದ ಗುಣ-ದೋಷಗಳೆ ಬೆಳೆಯಲ್ಲಿ ಕಾಣಬರುವುವಲ್ಲದೆ ಹೊರಗಿನವಲ್ಲ. ತನ್ನ ಮಗ ತನ್ನಂತೆ —ಆದರೆ-? ತನ್ನದೊಬ್ಬನದೆ ಮಗು ಇದಲ್ಲವಲ್ಲ ? ತನ್ನ ಮತ್ತು ಕುಮುದಳ —, ಅಲ್ಲಲ್ಲ, ಮಗು ತನ್ನದೆ. ಬೆಳೆ ಬೀಜದ್ದೆ. ಆದರೆ ಸುತ್ತಲಿನ ಗಾಳಿ-ಹವೆ, ಹೊರಗಿನ ನೆಲ-ನೀರು— ಇವುಗಳ ಪರಿಣಾಮವೂ ಆಗುವುದು, ಅದು ಗುಣ-ದೋಷಗಳನ್ನು ಕೊಡುವುದರಲ್ಲಿ ಅಲ್ಲ, ಗುಣ-ದೋಷ ಬರುವುದು ಬೀಜದಿಂದಲೆ. ಹಾಗೆ ಬಂದ ಗುಣ-ದೋಷಗಳ ಮೇಲೆ ಈ ಬಾಹ್ಯ ಕಾರಣಗಳ ಪ್ರಭಾವ. ಹೆಣ್ಣು ಗಾಳಿ ಹವೆ-ನೆಲ-ನೀರು ಇದ್ದಂತೆ, ಹುಟ್ಟು ಗುಣ, ಶರೀರರಚನೆ ಇದರ ನಿರ್ಣಯ ಗಂಡಿನಿಂದಲೆ—ಬೀಜದಿಂದಲೆ—

ರಾಮಣ್ಣ ತಟ್ಟನೆ ಕುರ್ಚಿಯಿಂದೆದ್ದ. ಇದೇನು ? ಹೀಗೇಕೆ ವಿಚಾರ ಗೊಂದಲದಲ್ಲಿ ಸಿಕ್ಕಿಕೊಂಡೆ ಬೇರೆ ಕೆಲಸಕ್ಕಾಗಿ ದಾರಿ ಕಾಯುತ್ತಿರುವಾಗ, ಎನ್ನುತ್ತ ಕೈಗಡಿಯಾರವನ್ನು ನೋಡಿಕೊಂಡ. ಇನ್ನೂ ಇಪ್ಪತ್ತುನಿಮಿಷ ! ಕಿಟಕಿಗೆ ಬಂದ, ಮೋಹನನು ಇನ್ನೂ ಬಂದನೊ ಇಲ್ಲವೊ, ಎಂದುಕೊಳ್ಳುತ್ತ.

ಓ ! ಎಂದು ನಕ್ಕ. ಮೋಹನನ ಸಂದರ್ಭದಲ್ಲಿಯೆ ಅಲ್ಲವೆ ತಾನೇನೇನನ್ನೊ ವಿಚಾರ ಮಾಡುತ್ತ ತರುಣ ಸಾಹಿತಿಯಂತೆ ಎಲ್ಲವನ್ನೂ ಬಲ್ಲೆ ಎನ್ನುತ್ತ ಅಡ್ಡದಾರಿಯನ್ನು ಹಿಡಿದದ್ದು ? ಅಡ್ಡದಾರಿ ಅಲ್ಲ – ಎಂದೆನ್ನಿಸಿತು ಮರುಗಳಿಗೆಗೆ. ತನ್ನ ತರ್ಕವೇನೊ ಅಡ್ಡದಾರಿಯನ್ನು ಹಿಡಿದಿರಬಹುದು, ಆದರೆ ಅನುಭವ ಪ್ರತ್ಯಕ್ಷವಿದೆಯಲ್ಲ ! ನಿಂತಲ್ಲಿಯೆ ತಿರುಗಿ ನಿಂತು ಗೋಡೆಗೆ ತೂಗಹಾಕಿದ್ದ ನರಲೆಯ ಭಾವಪಟವನ್ನು ನೋಡಿದ.

ಸಂಶಯವೆ ಇಲ್ಲ, ಎಂದ.

ಹತ್ತಿರ ನಡೆದು ಬಂದು ಭಾವಪಟವನ್ನು ಸೂಕ್ಷ್ಮವಾಗಿ ದಿಟ್ಟಸುತ್ತ, "ಅವೇ ಕಣ್ಗಳು" ಎಂದ.

ಕುಮುದಳೂ ಒಮ್ಮೆ ಅದೇ ಮಾತನ್ನು ಹೇಳಿದ್ದಿಲ್ಲವೆ ?

ಒಮ್ಮೆ ? ಯಾವಾಗ ? ಓ – ಆ ಸಲ ಸೋದರತ್ತೆಯ ಮನೆಗೆ ಹೋಗಿ ಅಕಸ್ಮಾತ್ತಾಗಿ ಬಂದವಳು, ತಾನು ಮೋಹನನನ್ನೆತ್ತಿ ಮುದ್ದಿಸಿದ್ದ, ಆಗ ಆಕೆ

ಏನೊ ನಮ್ಮಿಬ್ಬರ ನಲುವಾಗಿ ಅಂದಿದ್ದಳು, ಆ ಮಾತಿಗೆ ಮೋಹನ ಅರಳಿದ. ಕಣ್ಗಳಿಂದ ತನ್ನನ್ನೊಮ್ಮೆ ಆಕೆಯನ್ನೊಮ್ಮೆ ನೋಡಿ-ದ್ದಿನಲ್ಲ? ಆಗ—

ರಾಮಣ್ಣ ವೈರಾಗ್ಯದ ಉಸಿರನ್ನೆಳೆದು ಕುರ್ಚಿಯ ಮೇಲೆ ಕುಳಿತು ಕೊಂಡ. ಅಂದು, ಅದೊಂದೆ ಕ್ಷಣ ತನ್ನ ಇಡಿಯ ಜನ್ಮವೆ ಸುಖಮಯ ಎನ್ನಿಸಿತ್ತು!

ಅಹುದು, ಆಗ ಅಂದಿದ್ದಳು ಕುಮುದ,

"ಈ ಹುಡುಗನ ಕಣ್ಣು ಯಾರ ಹಾಂಗ ಅವ ಹೇಳಿರಿ?" ಎಂದು.

ತಾನು ಒಮ್ಮೆಲೆ ಎಚ್ಚೆತ್ತವನಂತೆ "ಯಾರ ಹಾಂಗ" ಎನ್ನುತ್ತ ಮೋಹನನನ್ನು ಮತ್ತೊಮ್ಮೆ ನೋಡಿದ್ದ.

ಆಗ ಅವನಿಗೆ ಹೊಳೆದಿತ್ತು. ಯಾರ ಹಾಗೆ? ತನಗೆ ಗೊತ್ತು. ಆದರೆ ಆ ಮಾತನ್ನು ಹೇಳಿದರೆ? ಅಕಸ್ಮಾತ್ತಾಗಿ ಆನಂದದಿಂದ ಪ್ರಾರಂಭ ವಾದ ಅವಳ ಗೃಹಪ್ರವೇಶ ವಿರಸವಾಗಬಹುದಲ್ಲ?

"ಯಾರ ಹಾಂಗ?" ಎಂದು ಪ್ರಶ್ನೆ ತಿಳಿಯದವನಂತೆ ಕೇಳಿದ್ದ.

"ಮೋಹನನ ಕಣ್ಣು ಯಾರ ಹಾಂಗ ಅವ ಅಂತ ಕೇಳಿದೆ. ಇಷ್ಟ ರೊಳಗೇ ಮರೆತುಬಿಟ್ಟರೇನು?"

ಮರೆತುಬಿಡುವುದು? ಓಹೊ-ಇವಳಿಗೂ ತಿಳಿದಿದೆ ಮಗುವಿನ ಕಣ್ಣು ಯಾರ ಹಾಗೆ ಇವೆ ಎಂಬುದು. ತಾನು ಸರಲೆಯನ್ನು ಮರೆತಿದ್ದಾನೆ ಎಂದು ಸೂಚಿಸುತ್ತಿದ್ದಾಳಲ್ಲ? ಆ ಸೂಚನೆಯೆ ಆಧಾರವೆನ್ನಿಸಿತ್ತು ತನಗೆ.

"ಯಾರ ಹಾಂಗೇನು? ಕೇವಲ ನಿನ್ನ ಕಣ್ಗಳ ಹಾಂಗೇ" ಎಂದಿದ್ದ.

ಉಹುಂ ಎಂದು ಅಸಮ್ಮತಿಯನ್ನು ಸೂಚಿಸುವಂತೆ ನಗೆಮೊಗದಿಂದಲೆ ತಲೆಯನ್ನಲ್ಲಾಡಿಸಿದ್ದಳು ಕುಮುದ.

"ಹಾಂಗಿದ್ದರ? ನನ್ನ ಹಾಂಗ ಅವ ಅಂತೀಯೇನು? ಛೆ!" ಎಂದಿದ್ದ.

ಕುಮುದ ಒಮ್ಮೆಲೆ ಉಸುರ್ಗರೆದು ಸುಮ್ಮನಾಗಿದ್ದಳು.

ಆಕೆಯ ಬಾಯಿಯಿಂದಲೆ ಆ ಮಾತು ಬರಲಿ ಎಂದು ನಿರೀಕ್ಷಿಸುತ್ತಿದ್ದ ತನಗೆ ನಿರಾಶೆಯಾಗಿತ್ತು. ಆಕೆ ತುಸ ತಡೆದಾದರೂ ಹೇಳಬಹುದೇನೊ ಎಂದು ಆಶೆ ಇಟ್ಟುಕೊಂಡ. ಆದರೆ ಆಕೆಯ ದೃಷ್ಟಿ ಎಲ್ಲಿಯೊ ದೂರ

ಹೋದಂತಾಗಿತ್ತು, ಆಕೆಯ ಮುಖದಲ್ಲಿ ನಿರಾಶೆಯ ಕಳೆ ಮೂಡಿತ್ತು, ಬಂದದ್ದು ಬರಲಿ ಎನ್ನುವವರಂತೆ ಮತ್ತೊಮ್ಮೆ ಉಸುರ್ಗರೆದಳು, ತನ್ನನ್ನು ನೋಡಿದ್ದಳು, ಈಗಲಾದರೂ ಹೇಳುವಳೇನೊ ಎನ್ನುವಷ್ಟರಲ್ಲಿ ಮೋಹನ ಮತ್ತೆ ಆಕೆಯ ಕಡೆ ಓಡಿದ್ದ, ಅವಸನ್ನೆತ್ತಿಕೊಂಡು ಒಳಗೆ ಹೋಗಿದ್ದಳು.

ಒಂದು ವೇಳೆ ಆಗ ತಾನು ಹೇಳಿದ್ದರೆ ? – ಎಂಬ ವಿಚಾರ ರಾಮಣ್ಣ ನಿಗೆ ಆ ತರುವಾಯ ಅನೇಕ ಸಲ ಬಂದಿತ್ತು. “ ನೀನು ಹೇಳುವುದು ನಿಜ, ಹುಡುಗನ ಕಣ್ಣುಗಳು ಸರಲೆಯ ಕಣ್ಣುಗಳ ಹಾಗೇ ಇವೆ ” ಎಂದು ತಾನು ಹೇಳಿದ್ದರೆ, ಆಕೆಗೆ ಸಮಾಧಾನವಾಗುತ್ತಿದ್ದಿತೆ ? ಆದರೆ–ಮನುಷ್ಯನ ಸ್ವಭಾವವೆ ವಿಚಿತ್ರವಾಗಿದೆ–! ಅಂದು ತಾನು, ಕುಮುದ, ಮೋಹನ ಅಪರೀಕ್ಷಿತವಾಗಿ ಒಂದು ಅಲೌಕಿಕ ಸುಖದ ಕ್ಷಣವನ್ನು ಕಂಡಿದ್ದರು. ಆ ಕ್ಷಣವನ್ನು ಶಕ್ಯವಾದಷ್ಟು ತಟಸ್ಥವಾಗಿರಿಸಬೇಕು ಎಂದು ರಾಮಣ್ಣನ ಉದ್ದೇಶ. ಯಾವ ಉದ್ದೇಶಕ್ಕಾಗಿ ತಾನು ಹಾಗೆ ನಡೆದುಕೊಂಡನೊ ಆ ನಡತೆಯಿಂದ ಅದಕ್ಕೆ ವಿರುದ್ಧವಾದ ಪರಿಣಾಮವಾಯಿತು ! ಸರಲೆಯ ನೆನಪು, ತಾನು ಸರಲೆಯನ್ನು ನೆನೆಸುವುದು, ಅದರಲ್ಲೂ ಕುಮುದಳ ಹೊಟ್ಟೆಯಲ್ಲಿ ಹುಟ್ಟಿದ ಮಗು ಸರಲೆಯನ್ನು ಹೋಲುತ್ತಿದೆ ಎಂದು ತಾನು ಹೇಳುವುದು ಆಕೆಯನ್ನು ಕೆರಳಿಸಬಹುದು ಎಂದು ತನ್ನ ಹೆದರಿಕೆ. ಆಕೆಯನ್ನು ಕೆರಳಿಸಬಾರದು ಎಂಬ ಸದುದ್ದೇಶ ತನಗೆ. ಸದುದ್ದೇಶಕ್ಕೆ ದುಷ್ಪರಿಣಾಮ !

ಇದಕಾಗಿಯೆ ಜನ ದೈವವೆನ್ನುವುದೊಂದಿದೆ ಎಂದು ನಂಬುತ್ತಾರೂ ಏನೊ ! ನಿಜವಾಗಿಯೆ ಜನರು ನಂಬಿದಂತಹ ದೈವಶಕ್ತಿ ಎಂಬುದೊಂದಿದ್ದರೆ ಮಾನವನಷ್ಟು ಕ್ಷುಲ್ಲಕ ಮತ್ತು ಅನುಕಂಪನೀಯ ಪ್ರಾಣಿ ಇನ್ನೊಂದಿಲ್ಲ ಎನ್ನಬೇಕಾಗುವುದು. ಯಾರಿಗೆ ಗೊತ್ತು ? ತನ್ನ ದೈವಗತಿಯೂ ವಿಪರೀತವೆ ಆಗಿದೆಯೊ ಏನೊ ?

ಅಥವಾ – ? ರಾಮಣ್ಣನಿಗೆ ಒಂದು ವಿಚಾರ ಹೊಳೆದಿತ್ತು ಈ ಬಗ್ಗೆ. ದೈವ ಎಂಬುದಿಲ್ಲ ; ಆದರೆ ಯಾವಾಗ ಮನುಷ್ಯನಿಗೆ ತನ್ನ ಹೊಣೆ ತಿಳಿಯುವುದಿಲ್ಲವೊ, ಇಲ್ಲವೆ ಯಾವಾಗ ಮನುಷ್ಯನು ತನ್ನ ಹೊಣೆಯನ್ನು ಹಾರಿಸಿಕೊಳ್ಳಲು ಯತ್ನಿಸುವನೊ ಆಗ “ದೈವ” ಎನ್ನುವನು, ಎಂದರೆ, “ದೈವ” ಎಂದಾಗೊಮ್ಮೆ ತನ್ನ ತಪ್ಪನ್ನೆ ಒಪ್ಪಿಕೊಂಡಂತೆ.

ನಿಜ. ಈಗ ಸಿದ್ಧನಿದ್ದಾನೆ ರಾಮಣ್ಣ ತನ್ನ ತಪ್ಪನ್ನೊಪ್ಪಿಕೊಳ್ಳಲು. ಅಂದು ನಡೆದದ್ದು ವಿಪರೀತ ದೈವಗತಿ ಅಲ್ಲ, ತನ್ನ ತಪ್ಪಿಗೆ ತಕ್ಕ ಪ್ರಾಯಶ್ಚಿತ್ತ. "ಹುಡುಗನ ಕಣ್ಣುಗಳು ಯಾರ ಹಾಂಗ ಅವ ಹೇಳಿರಿ ?" ಎಂದು ಕುಮುದ ಕೇಳಿದ ರೀತಿ, ಕೇಳುವಾಗಿನ ನಗೆಮೊಗ ಇವುಗಳಿಂದ ಆ ಪ್ರಶ್ನದ ಉತ್ತರ ಇಬ್ಬರಿಗೂ ಗೊತ್ತಿದ್ದಿತು ಎಂಬುದು ಸ್ಪಷ್ಟವಾಗುಪಂತಿದ್ದಿತು. ಮೋಹನನ ಕಣ್ಣುಗಳನ್ನು ಹೋಲುವ ಕಣ್ಣುಗಳುಳ್ಳ ಮತ್ತು ತನಗು ಕುಮುದಳಿಗು ಇಬ್ಬರಿಗೂ ಪರಿಚಿತವಿದ್ದ ವ್ಯಕ್ತಿಗಳಾದರೂ ಎಷ್ಟಿರಬಹುದು ? "ಯಾರ ಕಣ್ಣುಗಳು ?" ಎಂದರೆ "ಸರಲೆಯ ಕಣ್ಣುಗಳು" ಎಂಬ ನೇರವಾದ ಉತ್ತರವನ್ನು ಕುಮುದ ಅಪೇಕ್ಷಿಸಿದ್ದಳೇನೊ ?

ಆದರೆ ತಾನು ಮಾಡಿದ್ದು ಏನು ? ನೇರವಾದ ಉತ್ತರವನ್ನು ಕೊಡಲಿಲ್ಲ. "ನಿನ್ನ ಹಾಂಗ" ಎಂದು ಒಂದು ಅಪ್ರಾಮಾಣಿಕ ಉತ್ತರವನ್ನು ಕೊಟ್ಟ ; ಅದು ಅಲ್ಲ ಎಂದ ಮೇಲೆ "ನನ್ನ ಹಾಂಗ ಅಂತೀಯೇನು ?" ಎಂದು ಬಾಯಿಗೆ ಬಂದ ಉತ್ತರವನ್ನು ಕೊಟ್ಟಿದ್ದ. ಆಕೆ ಎಷ್ಟು ಉತ್ಸಾಹದಿಂದ ಕೇಳಿದ್ದಳೆಂಬುದರ ಮಹತ್ತ್ವವೆ ತನಗಿಲ್ಲ ಎನ್ನುವಂತೆ ವ್ಯವಹರಿಸಿದ್ದ.

ಯಾಕೆ ? ಕುಮುದಳು ತನ್ನನ್ನು ಮೆಚ್ಚಬೇಕೆಂದು !

ಅದಕ್ಕಾಗಿ ತನಗೆ ಶಿಕ್ಷೆಯಾಯಿತು. ಗಂಡನೊಡನೆ ತನ್ನ ಕೌಟುಂಬಿಕ ಜೀವನವನ್ನು ಕಲ್ಪಿಸುವುದರಲ್ಲಿ ದುರ್ವಾಸನನ್ನು ಮರೆತ ಶಕುಂತಲೆಗೂ ಶಿಕ್ಷೆಯಾಯಿತು, ಹಾಗೆ.

ನಿಜವಾಗಿ ಇದೊಂದು ಮಹತ್ತ್ವದ ವಿಚಾರ. ಕೇವಲ ತನ್ನ, ಸ್ವಾರ್ಥದ ದೃಷ್ಟಿಯಿಂದ ತನ್ನ ಹೊಣೆಯನ್ನು ತಪ್ಪಿಸಿಕೊಳ್ಳುವ, ತನ್ನ ಕರ್ತವ್ಯವನ್ನು ಕಡೆಗಣಿಸುವ ಮಾನವನಿಗೆ ಪ್ರಾಯಶ್ಚಿತ್ತ ತಪ್ಪಿದ್ದಲ್ಲ.

ರಾಮಣ್ಣನ ಮುಖದಲ್ಲಿ ನಗೆ ಮೂಡಿತು. "ನಿಜವಾಗಿ ಮಹತ್ತ್ವದ ವಿಚಾರ" ಎಂದು ತನ್ನನ್ನು ತಾನೇ ಅಣಕಿಸಿದ. ಮಹತ್ತ್ವದ ವಿಚಾರವಂತೆ! ಹಾಗಿದ್ದರೆ ಇಂತಹ ವಿಚಾರಗಳನ್ನು ಸಾರ್ವಜನಿಕ ಸಭೆಗಳಲ್ಲಿ ಹೇಳಲು ತಾನು ಸಿದ್ಧನಿರುವನೆ ? ಜನರು ಕೇಳಲಿ, ಬಿಡಲಿ – ತನ್ನ ಮಟ್ಟಿಗೆ ತಾನು ಸಿದ್ಧನಿರುವನೆ ?

ಉಂ – ಎನ್ನುತ್ತ ರಾಮಣ್ಣ ಗದ್ದವನ್ನು ತುರಿಸಿಕೊಂಡ. ಹೇಳ

ಬೇಕು, ಧೈರ್ಯವಾಗಿ ಸ್ಪಷ್ಟವಾಗಿ ಹೇಳಬೇಕು. ಜನರು ಕೇಳದಿದ್ದರೆ, ಅವರು ಕೇಳುವಂತೆ ರಂಜಕವಾಗಿ ಹೇಳಬೇಕು ? ತಾನು ಸಾಹಿತಿಯಲ್ಲವೆ? ಜನರಿಗೆ ಬೇಕೆಂದು ಬೀದಿಯ ಶ್ವಾನ - ಮೈಥುನದ ಕತೆಯನ್ನು ಹೇಳಲು ತಾನು ಸಿದ್ಧ ; ಆದರೆ ತನ್ನದೆ ಜೀವನದಲ್ಲಿ ಪರಸ್ಪರ ಪ್ರೀತಿಸುವ ಎರಡು ಹೃದಯಗಳ ವೈಮನಸ್ಯದಲ್ಲಿ ಒಣಗಿ ಸಾಯುತ್ತಿವೆ. ಆ ಕತೆಯನ್ನು ತಾನು ಯಾಕೆ ಹೇಳಬಾರದು ?

ಹೇಳೋಣ—ಎಂದುಕೊಂಡ. ಇಂದಿಗಂತೂ ನನ್ನ ಸಾಹಿತ್ಯಜೀವನದ ಒಂದು ಯುಗ ಮುಗಿದಂತಾಗುವುದು ; ಸಾರ್ವಜನಿಕ ಮನ್ನಣೆಯನ್ನು ಅಧಿಕೃತವಾಗಿ ಪಡೆದುಕೊಂಡಂತಾಗುವುದು ಇಂದಿನಿಂದ. ಆಮೇಲೆ ತನ್ನ ಪ್ರಾಮಾಣಿಕ ವಿಚಾರಗಳನ್ನೆ ರಂಜಕವಾಗಿ ಹೇಳೋಣ, ಹೇಳಬಹುದು, ಹೇಳಲು ಅಡ್ಡಿ ಇಲ್ಲ - ಎಂದು ಗದ್ದವನ್ನು ತುರಿಸುತ್ತಲೆ ಗುಂಯ್ಗುಡುತ್ತ ಎದ್ದು ಕಿಟಕಿಯ ಕಡೆ ನಡೆದ.

ಹೊರಗೆ ನೋಡಿದ. ಆಮೇಲೆ ಕೆಳಗಿಳಿಯುವ ಮೆಟ್ಟಿಲುಗಳ ಹತ್ತಿರ ಬಂದು ಲಕ್ಷ್ಯಪೂರ್ವಕವಾಗಿ ಕೆಳಗಿನ ಸದ್ದು-ಸುಳಿವನ್ನು ಕೇಳುತ್ತ ನಿಂತ. ಕೈ ಗಡಿಯಾರವನ್ನು ನೋಡಿಕೊಂಡ. "ಸಭೆ ಗೊತ್ತಾದ ಸಮಯಕ್ಕೆ ಸರಿಯಾಗಿ ಪ್ರಾರಂಭವಾಗುವುದಿದ್ದರೆ ಇನ್ನೂ 18 ನಿಮಿಷ" ಎಂದುಕೊಂಡ. ಅಥವಾ, ತಡವಾಗಿಯೆ ಸುರುವಾಗುವುದು ಖಂಡಿತ ; ಒಳಿತೇ ಆಯಿತು, ಮೋಹನನನ್ನೂ ಕರೆದುಕೊಂಡು ಹೋಗಲು ಅನುಕೂಲವಾಗುವುದು— ಎನ್ನುತ್ತ ದಣಿದವನಂತೆ ಉಸ್ ಎಂದು ಎರಡೂ ಅಂಗೈಗಳನ್ನು ತಲೆಯ ಹಿಂದಿಟ್ಟುಕೊಂಡು ಮುಖವನ್ನೆತ್ತಿ ಕುಳಿತುಕೊಂಡ.

## ೧೩

ಕುಮುದ ತಡೆದಳು. ಏನೊ ಸದ್ದಾದಂತಾಯಿತಲ್ಲ ? ಮೋಹನ ಬಂದನೆ ? ಒಳಿತೇ ಆಯಿತು, ನಾನೂ ಅವನಿಗಾಗಿ ಎಲ್ಲ ಸಿದ್ಧತೆಯನ್ನು ಮುಗಿಸಿ—ಅಲ್ಲ, ಬಾಗಿಲ ಸದ್ದಲ್ಲ ! ಕುಮುದ ಮುಖವನ್ನು ಮೇಲಕ್ಕೆತ್ತಿ ನೋಡಿದಳು. ಓ ! ಮಗನ ಬರವನ್ನು ತಂದೆ ಇದಿರು ನೋಡುವಂತಿದೆ !

ಒಂದು ನಿಮಿಷ ಮೆಟ್ಟಿಲುಗಳ ಮೇಲಿನ ಸದ್ದನ್ನು ಕೇಳಿದಳು. ಕ್ರಮೇಣ ಅವಳ ಮುಖ ಮುಗುಳ್ನಗೆಯಿಂದ ಅರಳಿತು. ಶೂನ್ಯದೃಷ್ಟಿಯಿಂದ ಇದಿರಿನಲ್ಲಿ, ದೂರದೂರ ಏನನ್ನೊ ಕಂಡವಳಂತೆ ನೋಡುತ್ತ ನಿಂತಳು. ನಿಮಾಧಾನದ ಉಸಿರನ್ನು ಬಿಟ್ಟು ಮತ್ತೆ ಕನ್ನಡಿಯೆದುರಿನ ಕುರ್ಚಿಯತ್ತ ನಡೆದಳು. ಕುಳಿತು ಕನ್ನಡಿಯಲ್ಲಿ ತನ್ನ ಪ್ರತಿಬಿಂಬವನ್ನು ಒಂದೇ ಸಮನೆ ದಿಟ್ಟಿಸಿದಳು.

"ನಿನಗ ಬಹಳ ಸಂತೋಷ, ಅಲ್ಲೇನೆ?, ರಾಮಣ್ಣ ಮೋಹನನನ್ನು ಪ್ರೀತಿಸುವ ಅಂತ. ಆಂ?" ಎಂದು ತನ್ನ ಪ್ರತಿಬಿಂಬವನ್ನು ಕೇಳಿದಳು. ಪ್ರತಿಬಿಂಬ ನಕ್ಕಿತು.

ಬಹಳ ಸಂತೋಷ – ಎಂದು ಮತ್ತೊಮ್ಮೆ ತನ್ನಷ್ಟಕ್ಕೆಯೆ ಹೇಳಿಕೊಂಡಳು. ಯಾರೊ ಯಾರನ್ನೊ ಪ್ರೀತಿಸುವರೆಂದು ತನಗೆ ಯಾಕೆ ಸಂತೋಷವಾಗಬೇಕೊ ?

ಹುಚ್ಚಿ ತಾನು! ಮೊದಮೊದಲು ಏನನ್ನೊ ತಿಳಿದುಕೊಂಡಿದ್ದಳು. ಆ ಸಲ ತಾನು ಮರಳಿ ಮೋಹನನೊಡನೆ ಬಂದಾಗ ರಾಮಣ್ಣ ಮೋಹನನ್ನೆತ್ತಿ ಮುದ್ದಿಸಿದ್ದನಲ್ಲ! ಆಗ? ತನಗೆಷ್ಟು ಸಂತೋಷವಾಗಿತ್ತು? ಮೋಹನನ ಜಾಗದಲ್ಲಿ ತಾನೇ ಇರುವಳೇನೊ ಎಂಬ ಭ್ರಾಂತಿಯಿಂದ ಮೈ ಜುಮ್ಮೆಂದು ಬೆವರೊಡೆದಿತ್ತು. ರಾಮಣ್ಣನ ಮುಖವನ್ನೂ ಉಲ್ಲಾಸವನ್ನೂ ನೋಡಿದಾಗ ರಾಮಣ್ಣ ತನಗಾಗಿ – ಕುಮುದಳಿಗಾಗಿ – ಇದ್ದ ಪ್ರೀತಿಯನ್ನೆ ಮೋಹನನ ಮೇಲೆ ಸುರಿಸುತ್ತಿದ್ದಾನೆ ಎಂದು ಸ್ಪಷ್ಟವಾದ ಭಾವನೆ ಮೂಡಿತ್ತು ತನ್ನ ಹೃದಯದಲ್ಲಿ. ಅಂದಿನ ಆ ದೃಶ್ಯವನ್ನು ಸರಲಕ್ಕ ನೋಡಿದ್ದರೆ—? ಎಂಬ ವಿಚಾರ ಎಲ್ಲಿಂದಲೊ ತನ್ನಲ್ಲಿ ಹಣಿಕಿಕ್ಕಿತ್ತು. ಮನೆಗೆ ಮಕ್ಕಳು ಬೇಕು ಎಂದು ಎಷ್ಟು ಸಲ ಹೇಳುತ್ತಿರಲಿಲ್ಲ? ರಾಮಣ್ಣನು ತನ್ನನ್ನು–ಕುಮುದಳನ್ನು – ಮದುವೆಯಾಗಬೇಕು, ಅವರಿಬ್ಬರಿಗೆ ಮಕ್ಕಳಾಗಬೇಕು, ಅದನ್ನು ತಾನು ಕಣ್ಣಾರೆ ನೋಡಿ ಸಾಯಬೇಕು ಎಂದು ಅಕ್ಕ ಮೇಲಿಂದ ಮೇಲೆ ಹೇಳುತ್ತಿದ್ದಳು. ಇಂದು ಆಕೆ ಜೀವದಿಂದಿದ್ದರೆ? ತನ್ನ ಮತ್ತು ರಾಮಣ್ಣನ ಮಗು, ರಾಮಣ್ಣ ಮುದ್ದಿನ ಮಗುವಿನ ಜೊತೆ ಮಗುವಿನಂತೆ ಆಟವಾಡುತ್ತಿದುದನ್ನು ನೋಡಿದ್ದರೆ? ಕುಮುದ ಅತ್ಯಂತ ವಾತ್ಸಲ್ಯಪೂರಿತ ದೃಷ್ಟಿ

ಯಿಂದ ಮಗನನ್ನು ನೋಡಿದಳು. ಎದೆ ಧಸ್ಸೆಂದಿತು. ಅಕ್ಕ! – ಅಲ್ಲ, ಅಕ್ಕನ ಕಣ್ಣುಗಳು! ಅಲ್ಲ – ಮೋಹನನ ಕಣ್ಣುಗಳು! ತದ್ರೂಪ ಅಕ್ಕನ ಕಣ್ಣು ಗಳಂತೆಯೆ ಇವೆಯಲ್ಲ! ಇದುವರೆಗೂ ಹೇಗೆ ತನ್ನ ಲಕ್ಷ್ಯಕ್ಕೆ ಬಂದಿರಲಿಲ್ಲ? ಮಗನ[illegible]ೋಡಿದಳು; ಏನೂ ಸಂಶಯವಿಲ್ಲ. ಅಕ್ಕನ ಕಣ್ಣುಗಳೆ! ಇಂದಿನ ಈ [illegible]ನ್ನು ನೋಡುತ್ತಿದ್ದಾಳೆ! ಧನ್ಯಳಾದಳು ಸರಳಕ್ಕ—

ಅಷ್ಟರಲ್ಲಿ ರಾಮಣ್ಣನೂ ತನ್ನನ್ನು ನಗೆರೂಪದಿಂದ ನೋಡಿದ್ದ. ತನಗೆ ಏನೆನ್ನಿಸಿತೊ ಏನೊ? ಮೋಹನನ ಕಣ್ಣು ಯಾರ್ಹಾಂಗ ಅವ ಅಂತ ಕೇಳಿ ಬಿಟ್ಟಳು!

ಎಷ್ಟೊಂದು ಉತ್ಸುಕತೆಯಿಂದ ಆ ಪ್ರಶ್ನವನ್ನು ಕೇಳಿದ್ದಳು? ತಾನು ನೋಡಿದ್ದು ರಾಮಣ್ಣನ ಲಕ್ಷ್ಯಕ್ಕೂ ಬರಲಿ, ತನಗಾದ ಸಂತೋಷ ಅವನಿಗೂ ಆಗಲಿ, ತಾವಿಬ್ಬರೂ ಅಂದು ಸರಳಕ್ಕನನ್ನು ಸ್ಮರಿಸಿ ಕೃತಕೃತ್ಯರಾಗೋಣ – ಎಂದು ಹಟದಿಂದ ಮತ್ತೊಮ್ಮೆ ಆ ಪ್ರಶ್ನವನ್ನು ಕೇಳಿದ್ದಳು.

ರಾಮಣ್ಣನಿಗೆ ತನ್ನ ಪ್ರಶ್ನವೆ ತಿಳಿದಿರಲಿಲ್ಲವೇನೊ? ಎರಡನೆಯ ಸಲ ಕೇಳಿದಾಗೂ ಮೋಹನನನ್ನು ನೋಡಿದಂತೆ ಮಾಡಿ "ನಿನ್ನ ಹಾಂಗ ಅವ" ಎಂದಿದ್ದ. ಛಿ! ಎಂತಹ ಅಸಂಬದ್ಧ ಮಾತು! ಇಷ್ಟೊಂದು ಸ್ಪಷ್ಟವಾಗಿ ಕಾಣುವುದನ್ನು ಸರಿಯಾಗಿ ನೋಡಬಾರದೆ? ರಾಮಣ್ಣ ಅಂತಹ ಯಾವುದನ್ನೂ ಮಾಡಲಿಲ್ಲ. "ನನ್ಹಾಂಗ ಅವ ಅಂತೀ ಏನು?" ಎಂದಿದ್ದ.

ತನಗೆ ಅತ್ಯಂತ ನಿರಾಶೆಯಾಗಿತ್ತು. ಮುಂದೆ ಅಲ್ಲಿ ನಿಂತು ಮಾತನಾಡಬೇಕೆಂದೆನ್ನಿಸಿರಲಿಲ್ಲ. ತನ್ನ ಕಡೆ ಬಂದ ಮೋಹನನ್ನೆತ್ತಿಕೊಂಡು ತಾನು ಬಿರಬಿರ ಒಳಗೆ ಹೋಗಿದ್ದಳು.

ಗಂಡಸರ ಸ್ವಭಾವ ಇಷ್ಟೊಂದು ಕೃತಘ್ನವಾಗಿರುವುದೆ ಎಂಬ ಸಂಶಯದಿಂದ ಎಷ್ಟೊ ದಿನ ತೊಳಲಾಡಿದ್ದಳು. ಸರಳಕ್ಕನ ಕಣ್ಣುಗಳು ಹೇಗಿವೆ ಎಂಬುದನ್ನು ಪೂರ್ತಿಯಾಗಿ ಮರೆತಿರಬಹುದೆ ರಾಮಣ್ಣ? ಹಾಗಿದ್ದರೆ ತಾನು ಯಾವ ಆಶೆಯನ್ನಿಟ್ಟುಕೊಂಡು ಬಾಳುವೆಯನ್ನು ಸಾಗಿಸಬೇಕು? ತನ್ನೊಡನೆ ಸಂಸಾರಗಿತ್ತಿಯಾಗಿರುವಾಗ ಮಾತ್ರ ಹೆಂಡತಿಯ ಇರುವಿಕೆಯ ಎಚ್ಚರ ಗಂಡಸಿನ ಸ್ವಭಾವವಾದರೆ ಹೆಣ್ಣಿನ ಗತಿ ಏನು?

ಅಹುದು. ಗಂಡಸಿನ ಸ್ವಭಾವವೆ ಹಾಗೆ. ತಾನು ಕೇಳಿದ್ದಳಲ್ಲ ತನ್ನ

ಸೋದರತ್ತೆಯ ಅನುಭವವನ್ನು? ಪಾಪ! ಹಳೆಯ ವಿಚಾರದ ಮುದುಕಿ! ಆದರೆ ಇನ್ನೂ ಹೆಮ್ಮೆಯಿಂದ ಹೇಳಿಕೊಳ್ಳುತ್ತಾಳೆ—ಗಂಡನೊಡನೆ ತಾನು ನಡೆಸಿದ ಬಾಳುವೆಯ ಬಗ್ಗೆ. ಒಮ್ಮೆ ಅದೇನೊ ಹೇಳಿದ್ದಳಲ್ಲ? ಹಂ.... ಹೊರಗೆ ಇಷ್ಟೊಂದು ಸ್ವೈರವೃತ್ತಿಯಿಂದ ನಡೆದುಕೊಳ್ಳೋ ಗಂಡನ್ನ ಹತ್ತಿರ ಬರಗೊಡಬಾರದು ಎಂದು ತಾನು ಹೇಳಿದ್ದಕ್ಕೆ ಅತ್ತೆ ಉತ್ತರ ಕೊಟ್ಟಿದ್ದಳು.

"ಅಯ್ಯ! ಕುಮುದೀ! ಗಂಡಸು ಹೊರಗ ಏನೇನು ಮಾಡ್ತಾನ ಅನ್ನೋದನ್ನ ಲಕ್ಷ್ಯಕ್ಕ ತಂದರ ಹೆಂಗಸು ಬಾಳೋದೇ ಕಷ್ಟ ಆದೀತು."

"ಅಂದ್ರೇನು, ಅತ್ತೀ! ದಿವಸಾನುದಿವಸ ಇಡೀ ರಾತ್ರಿ ಇನ್ನೊಬ್ಬರ ಮಗ್ಗುಲೊಳಗ ಕಳೆದು ಬಂದರ ಮನಸ್ಸಿಗಾದ್ರೂ ಮೈಲಿಗೆ ಅನ್ನಿಸ್ತದೊ ಇಲ್ಲೊ?" ಎಂದು ತಾನು ಅಭಿಮಾನದಿಂದಲೆ ಕೇಳಿದ್ದಳು.

"ಅವ್ವವ್ವವ್ವ! ಅಂತೂ ಮಡೀ-ಮೈಲಿಗೆಯ ವಿಚಾರ ಈಗಿನ ಹುಡುಗೇರಿಗೂ ಅದ ಅನ್ನು. ಆಂ?"

"ನಾನು ಕೇಳಿದ್ದಕ ಏನಂತೀ?" ಎಂದು ತಾನು ಹಟವನ್ನೆ ಹಿಡಿದಿದ್ದಳು.

"ನೋಡು ಕುಮುದೀ, ಚಪ್ಪಾಳಿಗೆ ಎರಡು ಕೈ ಬೇಕು. ಹೌದಂ-ತೀಯೊ ಇಲ್ಲೊ? ನನ್ದೂ ತಪ್ಪು ಇತ್ತು. ನಾನು ಹ್ಯಾಂಗ ಅವರ ಮ್ಯಾಲೆ ಸಿಟ್ಟಾಗಲಿ?"

"ನಿನ್ನ ತಪ್ಪು ಇತ್ತು?"

"ಇತ್ತು ಅಂದ್ರ, ಅದಕ್ಕ ನಿರ್ವಾಹನೇ ಇದ್ದಿರಲಿಲ್ಲ. ಅಲ್ಲ, ಕುಮುದೀ, ದೊಡ್ಡ ಸಂಸಾರ ಮನೀವಳಗ. ಹತ್ತರ ಜೋಡಿ ನಾವಿಬ್ರು ಹನ್ನೊಂದು. ಅವರು ಮನೆಗೆ ಬಂದರ ನಾವು ಮರೆಯೊಳಗೇ ಅಡ್ಡಾಡೋದು, ಅವರು ನನ್ನ ಮಾತಾಡಿಸಿದರ ನಮ್ಮ ಅತ್ತೆ ಉತ್ತರಾ ಕೊಡೋದು, ಸುಖ-ದುಃಖ-ನಗೆ-ನೋವು ಏನಾದ್ರೂ ಹೇಳಬೇಕಂದ್ರ ನಾನು ಎಲ್ಲ ಕೆಲಸ ಮುಗಿಸಿ ಹೋಗೋದಕ ಅವರಿಗೆ ನಿದ್ದೆ ಹತ್ತಿರೋದು, ಬೆಳಗು-ಮುಂಜಾನೆ ಅವರಿಗೆ ಎಚ್ಚರಾಗೋ ಮುಂಚೆ ನಾನು ಸದ್ದಿಲ್ಲದೆ ಎದ್ದು ಕೆಲಸಕ್ಕೆ ಹೋಗೋದು. ಅವರಿಗೆ ಯಾಕ ಬ್ಯಾಸರ ಆಗ್ತಾಬರ್ದು ಹೇಳು? ಹೊರಗಿನ ಸಹವಾಸ ಸೇರತಿತ್ತು

ಅವರು ಹೊರಗ ಹೋಗಿದ್ದಿಲ್ಲ, ಮನೀವಳಗ ಸಹವಾಸೇ ಇದ್ದಿದ್ದಿಲ್ಲ ಅಂತ– ಅಯ್ಯ ! ಕೇಳ್ತೀಯೋ ಏನು ನನ್ನ ಬರೀ ದಿಟ್ಟಿಸಿ ನೋಡ್ತಿಯೋ ?"

"ಅತ್ತೀ, ನೀನು ಓದು–ಬರೆ ಕಲಿತಿದ್ದರ—"

"ನಂ ಕಾಲದಾಗ ನನ್ನ ಮದೀವೀನೇ ಆಗ್ತಿದ್ದಿಲ್ಲ." ಎಂದು ನಕ್ಕು ಬಿಟ್ಟಿದ್ದಳು ಮುದುಕಿ.

ಆದರೆ–ಆಕೆಯ ಮಾತು ನಿಜವೇ ? ಮನೆಯೊಳಗ ಸಹವಾಸ ಇಲ್ಲ ಎನ್ನೋದಕ್ಕೆ ಹೊರಗೆ ಹೋಗುವುದಾದರೆ ಗಂಡಸು ಒಬ್ಬನಿಗೇ ಯಾಕೆ ಆ ನೆವ ? ಇಡೀ ಹಗಲು ಆಫೀಸಿನಲ್ಲಿ ದುಡಿದು ರಾತ್ರಿ ದಣಿದು ಮನೆಗೆ ಬರುವ ಗಂಡನ ಸಹವಾಸ ಎಷ್ಟು ಸಿಕ್ಕುವುದು ಹೆಂಡತಿಗೆ ? ಆಕೆಯೂ ಹಾಗೇ ಮಾಡಿದರೆ ಸಮಾಜ ಸಹಿಸುವುದೇ ?

ಹೋಗಲಿ–ರಾಮಣ್ಣ ಸರಳಕ್ಕನನ್ನು ಮರೆಯಲು ಯಾವ ನೆವವೂ ಇದ್ದಿಲ್ಲವಲ್ಲ ?

ಅಥವಾ—?

ಕುಮುದಳಿಗೆ ಹಿಂದೊಮ್ಮೆ ಬಂದ ವಿಚಾರ ಇಂದು ಮತ್ತೆ ತಲೆ ಎತ್ತಿತು. ರಾಮಣ್ಣ ಸರಳಕ್ಕನನ್ನು ಮರೆತಿರಲಿಲ್ಲ. ಆದರೆ ತನಗಾಗಿ ಹಾಗೆ ಸುಳ್ಳನ್ನು ಹೇಳಿರಬೇಕು.

ಎಂತಹ ಅನ್ಯಾಯ ! ಸರಳಕ್ಕನನ್ನು ನೆನೆದರೆ ತಾನೂ ಅಸೂಯೆ ಪಡುವಳು ಎಂಬ ವಿಚಾರ ರಾಮಣ್ಣನಿಗೆ ಬಂದಿತಾದರೂ ಹೇಗೆ ?

ಕುಮುದ ಮತ್ತೆ ಕನ್ನಡಿಯಲ್ಲಿ ತನ್ನ ಮುಖಬಿಂಬವನ್ನು ದಿಟ್ಟಿಸಿ ನೋಡಿದಳು.

ಆ ಪ್ರತಿಬಿಂಬದ ಮುಖದ ಮೇಲಿನ ಕಳೆಯನ್ನು ನೋಡಿದಾಕ್ಷಣ ಆಕೆಗೆ ಮುಳ್ಳು ನೆಟ್ಟಂತಾಯಿತು.

"ರಾಮಣ್ಣನಿಗೆ ಆ ವಿಚಾರ ಬಂದಿತಾದರೂ ಹೇಗೆ ಅನ್ನುವೆಯಲ್ಲ ? ಎಂತಹ ಹೊಯ್ಮಾಲಿಯೆ ನೀನು ? ರಾಮಣ್ಣ ನಿನ್ನನ್ನು ಪ್ರೀತಿಸುವುದಿಲ್ಲ, ಇನ್ನೂ ಸರಳಕ್ಕನನ್ನೇ ಪ್ರೀತಿಯಿಂದ ನೆನೆಸುತ್ತಾನೆ ಎಂದು ಎಷ್ಟು ಸಲ ಸೆಟವಿಯಾಗಿ ನೀನು ಮುಖ ತಿರುಗಿಸಿಲ್ಲ ? ನೀನು – ನೀನು—"

ಎದುರಿಗಿದ್ದುದು ಪ್ರತಿಬಿಂಬ ಎಂದು ಹೊಳೆದು ಕುಮುದಳ ಆವೇಶ ಇಳಿಯಿತು.

ಇದುವರೆಗೆ ಕಣ್ಣೆದುರಿಗಿದ್ದ ಒಂದು ದಪ್ಪ, ಕಪ್ಪು ತೆರೆ ಸರ್‍ರನೆ ಸರಿದಂತಾಯಿತು.

ಕುಮುದ ದೀರ್ಘವಾದ ಯೋಚನೆಯಲ್ಲಿ ತೊಡಗಿದಳು. ಆಕೆಯ ಕಣ್ಗಳು ಎಂದಿನದನ್ನೋ ನೋಡಲು ಹಟ ತೊಟ್ಟಂತೆ ಒಳನೆಟ್ಟವು. ಒಂದೆ-ರಡು ನಿಮಿಷಗಳ ತರುವಾಯ ಬಾವಿಯಲ್ಲಿ ಇಳಿಬಿಟ್ಟ ಕೊಡ ತುಂಬಿ ಮೇಲೆ ಬರುವಂತೆ ಒಳನೆಟ್ಟ ಅವಳ ಎರಡೂ ಕಣ್ಗಳು ನೀರುದುಂಬಿ ಸದ್ಯದ ಪ್ರಪಂಚಕ್ಕೆ ಏರಿಬಂದುವು.

ಕುಮುದಳಿಗೆ ಈಗ ಹೊಳೆಯಿತು ತನ್ನ ವೈವಾಹಿಕ ಜೀವನ ತನಗೆ ಮತ್ತು ರಾಮಣ್ಣನಿಗೆ ಇಬ್ಬರಿಗೇ ಸಂಬಂಧಪಟ್ಟರಲಿಲ್ಲ ಎಂಬುದು. ತಾನು ಆ ಮಾತನ್ನೇ ತಿಳಿದಿರಲಿಲ್ಲ.

ಆ ದಿನ ತನ್ನ ಸೋದರತ್ತೆ ಹೇಳಿರಲಿಲ್ಲವೇ ? ಮನೆಯಲ್ಲಿ ಮಿಕ್ಕವರಿ-ಗಾಗಿ ಪರಸ್ಪರ ಸಹವಾಸ ತೃಪ್ತಿಕರವಾಗುತ್ತಿದ್ದಿಲ್ಲ ಎಂದು ? ಆ ಮಾತನ್ನು ಅತ್ತೆ ತಿಳಿದುಕೊಂಡಿದ್ದಳು, ಅದಕ್ಕಾಗಿ ಆಕೆ ಗಂಡನ ಮೇಲೆ ಸಿಟ್ಟು ಮಾಡುತ್ತಿರಲಿಲ್ಲ. ಇಷ್ಟೇ ಅಲ್ಲ, ದೊರೆಯುವ ಅಲ್ಪ ಅವಕಾಶಗಳಲ್ಲಿ ತನ್ನ ಹೃದಯವನ್ನೇ ಬಯಲಿಗಿಟ್ಟಂತೆ ಪ್ರೇಮವನ್ನು ಸೂಸುತ್ತಿದ್ದಳು. ಆ ಪ್ರೇಮದ ರುಚಿಕಂಡಲ್ಲಿ ಬೇರೆ ಎತ್ತಲೂ ಮನಸ್ಸು ಸುಲಭವಾಗಿ ಹರಿಯಕೂಡದು ಎಂದು. ನಿಜವಾಗಿ ಅಂದು ಸೋದರತ್ತೆ ತನಗೆ ಮಾರ್ಗದರ್ಶಿನಿಯಾಗಿದ್ದಳು, ತಾನು ಮಾತ್ರ ಕುರುಡಾಗಿದ್ದಳು.

ತನ್ನ ಪರಿಸ್ಥಿತಿ ಸೋದರತ್ತೆಯ ಪರಿಸ್ಥಿತಿಗಿಂತ ತೀರ ಭಿನ್ನ ಎಂಬುದನ್ನು ಕುಮುದ ಬಲ್ಲಳು. ಆದರೆ ಅದಕ್ಕಾಗಿಯೆ ಅದು ಹೆಚ್ಚು ದುಸ್ತರವೂ ಆಗಿತ್ತು.

ರಾಮಣ್ಣ ತನ್ನನ್ನು ಮದುವೆಯಾದ, ತಾನು ರಾಮಣ್ಣ ಇಬ್ಬರೆ ಮನೆಯಲ್ಲಿ ಎಂದುಕೊಂಡಿದ್ದವಳಲ್ಲವೆ ?

ತಾನೆಂತಹ ಬುದ್ಧಿಗೇಡಿ !

ಮನೆಯಲ್ಲಿ ಮೂರನೆಯವರಿರದಿದ್ದರೂ ಮನದಲ್ಲಿ ಮೂರನೆಯವರಿದ್ದ-ರಲ್ಲ ? ಸರಳಕ್ಕನ ನೆನಪು ಮನೆಯಲ್ಲಿ ಮೂರನೆಯ ವ್ಯಕ್ತಿಯೆ ಆಗಿತ್ತೆನ್ನ-

ಬಹುದು. ತಾವು ಮಾಡಿದ್ದೇನು ? ಆ ವ್ಯಕ್ತಿಯ ಕಣ್ಣು ತಪ್ಪಿಸಲು ಯತ್ನಿಸಿದ್ದು! ಎಂತಹ ದಡ್ಡತನ! ಯಾಕೆ? ಸರಳಕ್ಕನೆ ತಮ್ಮಿಬ್ಬರ ಮದುವೆ-ಯನ್ನು ಬಯಸಿದ್ದಿಲ್ಲವೇ? ಅದನ್ನು ತಾವು ಬಹಿರಂಗವಾಗಿ ಒಪ್ಪಿಕೊಂಡಿದ್ದರೆ? ಇದಲ್ಲದೆ ರಾಮಣ್ಣ ಎಷ್ಟೋ ವರ್ಷ ಪ್ರೀತಿಯ ಸಂಸಾರವನ್ನು ಮಾಡಿದವ. ಅವನ ಹೃದಯದಲ್ಲಿ ಸರಳಕ್ಕ ನೆಲೆಸಿರುವುದು ಆಶ್ಚರ್ಯವಲ್ಲವಲ್ಲ ? ಸ್ಪಷ್ಟ-ವಾದುದನ್ನು, ಸಹಜವಾದುದನ್ನು ಕಣ್ತಪ್ಪಿಸಿ ಮರೆಯಲು ಯತ್ನಿಸಿದ ತಮ್ಮ ಅವಸ್ಥೆ ಕಾಲಿಗೆ ಪೆಟ್ಟು ತಾಕಿದವ ಎಡವದಂತೆ ಎಚ್ಚರಿಕೆ ವಹಿಸಲು ಯತ್ನಿಸಿ-ದಂತಾಗಿತ್ತು; ಪೆಟ್ಟು ತಾಕಿದ್ದಲ್ಲಿಯೆ ಎಡವಿದ್ದರು!

ರಾಮಣ್ಣ ಇನ್ನೂ ಸರಲೆಯನ್ನೆ ಪ್ರೀತಿಸುತ್ತಾನೆ ಎಂದು ತಾನು—

ಸರಳಕ್ಕನ ನೆನಪು ತನಗೆ – ಕುಮುದಳಿಗೆ – ಅಸಹ್ಯವಾಗುವುದೆಂದು ರಾಮಣ್ಣ—

ಇಬ್ಬರೂ ಇದುವರೆಗೆ ಎರಡುಬದಿ ಚೂಪಾಗಿದ್ದ ಸಲಾಕೆಯನ್ನು ನಡುವೆ ಇಟ್ಟುಕೊಂಡು ಒಬ್ಬರೊಬ್ಬರ ಹತ್ತಿರ ಬರಲು ಯತ್ನಿಸಿದ್ದಾರೆ !

ಕುಮುದಳು ಗಾಬರಿಗೊಂಡವಳಂತೆ ಒಮ್ಮೆಲೆ ತಡೆದಳು. ಇದೇನು? ತನ್ನ ವಿಚಾರಸರಣಿ ಸರಿಯಾಗಿದೆಯೆ ? ಇಲ್ಲವೆ ನೀರಡಿಸಿ ಕಂಗಾಲಾದವನು ಬಿಸಿಲುಗುದಿರೆ ನೀರಿನ ಪ್ರವಾಹ ಎಂದು ತರ್ಕದಿಂದ ಸಿದ್ಧಮಾಡುವಂತೆ ನಡೆಸಿದ್ದಾಳೆಯೆ ತಾನು ? ರಾಮಣ್ಣ ನಿಜವಾಗಿಯೆ ತನ್ನನ್ನು ಪ್ರೀತಿಸುತ್ತಿರ-ಬಹುದೆ ? ತಾವಿಬ್ಬರು ಅಪರಾಧಿಗಳಂತೆ ಸರಳಕ್ಕನನ್ನು ತಪ್ಪಿಸಲು ಯತ್ನಿಸದೆ ಅವಳನ್ನು ತಮ್ಮ ಸಂಗಾತಿಯಾಗಿ ಮಾಡಿಕೊಂಡಿದ್ದರೆ ಒಳಿತಾಗುತ್ತಿದ್ದಿತೆ ?

ಕುಮುದಳ ಕಣ್ಮುಂದೆ ಹಿಂದಿನ ಒಂದು ನೆನಪು ಹೊಳೆಯುವ ಬಣ್ಣದ ಚಿತ್ರದಂತೆ ನಿಂತಿತು. ಮದುವೆಯಾದ ಪ್ರಾರಂಭದಲ್ಲಿ ರಾಮಣ್ಣ ಒಂದೇ ಸಮನೆ ಸರಳಕ್ಕನ ಬಗ್ಗೆ ಮಾತನಾಡುತ್ತಿದ್ದ. ಅದು ತನಗೆ ರುಚಿಸುತ್ತಿರಲಿಲ್ಲ, ಅದನ್ನು ಬಿಟ್ಟರೆ ರಾಮಣ್ಣನ ನಾಲಗೆ ತಡವರಿಸುತ್ತಿತ್ತು !

ಪಾಪ! ರಾಮಣ್ಣನಾದರೂ ಏನುಮಾಡಬಲ್ಲವನಾಗಿದ್ದ ? ಅಷ್ಟು ವರ್ಷ ಪ್ರೀತಿಯ ಸಂಸಾರವನ್ನು ಒದಗಿಸಿದ ಸರಳಕ್ಕನನ್ನು ಹೇಗೆ ಮರೆಯ-ಬಲ್ಲ ? ಅದೇ ಸ್ನೇಹಪರಿಚಯವಾದ ತನ್ನೊಡನೆ ಬೇರೆ ಯಾವುದನ್ನು ಮಾತನಾಡಬಲ್ಲ ? ಆದರೆ ತನಗೆ ಆಗ ತಿಳಿದಿರಲಿಲ್ಲವೇನೋ ? ಸರಳಕ್ಕನ

ಬಗ್ಗೆ ಮಾತನಾಡುವನೆಂದರೆ ಸರಳಕ್ಕನನ್ನೆ ಪ್ರೀತಿಸುವನೆಂದು ತಾನು ತಿಳಿದು-ಕೊಂಡಿದ್ದಳು. ಅದು ತಪ್ಪೆ ? ಮೋಹನನನ್ನು ಪ್ರೀತಿಸಿಯೂ ತಾನು ರಾಮಣ್ಣನನ್ನು ಪ್ರೀತಿಸುವುದಿಲ್ಲವೆ ? ಹಾಗೆ – ಸರಳಕ್ಕನ ಸ್ಮೃತಿಯನ್ನು ಪ್ರೀತಿಸುವಾಗಲೂ ತನ್ನನ್ನು ಪ್ರೀತಿಸಬಲ್ಲನಲ್ಲವೆ ?

ಕುಮುದಳ ಮುಖದಲ್ಲಿ ನಗೆ ಮೂಡಿತು. ಆದರ್ಶಪ್ರೇಮವೆಂದರೆ ತನ್ನ ಸೋದರತ್ತೆಯದು. ಅಲ್ಲ, ಎಂತಹ ಹೆಣ್ಣುಹೃದಯ ! ಗಂಡ ಹೊರಗೆ ಎಲ್ಲಿ ಹೋಗುತ್ತಾನೆ, ಏನು ಮಾಡುತ್ತಾನೆ ಎಂಬುದನ್ನು ಅರಿತೂ ಅವನ ಮಗ್ಗುಲಿನಲ್ಲಿ ಸುಖವನ್ನು ಕಾಣುತ್ತಿದ್ದಳಲ್ಲ! ಥೂ! ಆ ಕಲ್ಪನೆಯಿಂದ ಹೇಸಿಕೆ ಎನ್ನಿಸುತ್ತಿರಲಿಲ್ಲವೆ ಎಂದು ತಾನು ಕೇಳಿದರೆ ಮುದುಕಿ ಅತ್ಯಂತ ಅಭಿಮಾನದಿಂದ ಉತ್ತರಕೊಟ್ಟಿದ್ದಳು.

"ಅಲ್ಲ, ಕುಮುದೀ, ಹೊರಗೆ ಅಡ್ಡಾಡಿ ಬರೋ ಗಂಡಸಿನ ಅಂಗೀ ಮ್ಯಾಲೆ ಕಾಗೆ ಹೇತರೆ ಹೇಸಿ ಆ ಅಂಗಿಯನ್ನೇ ಒಗೆದುಬಿಡಬೇಕೋ ಇಲ್ಲ, ಸಬಕಾರ ಹಚ್ಚಿ ಅದನ್ನ ಸ್ವಚ್ಛ ಒಗೆಯಬೇಕೋ ?"

"ಅಂದ್ರೇನು, ಅತ್ತೀ, ಸ್ನಾನ ಮಾಡಿಸದೆ ಗಂಡನ್ನ ಒಳಗೆ ಬಿಡತಿ-ದ್ದಿಲ್ಲೊ ಏನು ?"

"ಅವರ ಮನಸ್ಸು ಸ್ವಚ್ಛ ಇದ್ದರ ಸ್ನಾನ ಆದಾಂಗ ಆಯ್ತು, ನನ್ನ ಮನಸ್ಸು ಸ್ವಚ್ಛ ಇದ್ದರ ಅದೇ ಸಬಕಾರ ಆಯ್ತು." ಮುದುಕಿ ತಿಳಿದು ಮಾತನಾಡಿದ್ದಳೊ, ಮಾತಿಗೆ ಮಾತು ಇರಲಿ ಎಂದು ಮಾತನಾಡಿದ್ದಳೊ– ಅಂತೂ ಒಂದು ತತ್ತ್ವಜ್ಞಾನದ ತಿರುಳಿನಂತಹ ಮಾತನ್ನು ಹೇಳಿದ್ದಳು.

ಕುಮುದ ಒಮ್ಮೆಲೆ ಕುರ್ಚಿಯಿಂದೆದ್ದಳು. ಒಳಗಿನ ವಿಚಾರಕ್ಕಾಗಿ ಒಂದೆಡೆ ಕುಳಿತುಕೊಳ್ಳಬೇಕೆಂದೆನ್ನಿಸಲೊಲ್ಲದು ಆಕೆಗೆ; ಒಳಗಿನ ವಿಚಾರಗಳ ಹಿಡಿತದಿಂದ ತಪ್ಪಿಸಿಕೊಳ್ಳುವವಳಂತೆ ಅಡ್ಡಾಡತೊಡಗಿದಳು.

ನಿಜವೇ ? ನಿಜವೇ ? ನಿಜವೇ ?

ವಿಚಾರ ಆಕೆಯನ್ನು ಬೆನ್ನಟ್ಟಿದೆ, ಬಿಡಲೊಲ್ಲದು; ತಟ್ಟನೆ ಹಿಡಿಯು-ವುದು, ಕೂಡಲೆ ಜಾರಿಕೊಳ್ಳುವಳು.

ರಾಮಣ್ಣ ತನ್ನನ್ನು ಪ್ರೀತಿಸುತ್ತಿರುವುದು—ನಿಜವೆ ? ನಿಜವೆ ? ನಿಜವೆ ?

ಬೇರೆ ಯಾರನ್ನಾದರೂ ನಂಬಬಹುದು. ಆದರೆ ತನ್ನನ್ನು ತಾನು ನಂಬುವುದು ಶಕ್ಯವಿಲ್ಲ ಎನ್ನುವ ಅವಸ್ಥೆಯಾಯಿತು ಕುಮುದಳದು. ಹತ್ತು ವರ್ಷಗಳಿಂದ ತಡೆದ ವಿಚಾರ, ತನಗೆ ಇಷ್ಟವೆನ್ನಿಸುವ ವಿಚಾರ, ಈಗ ತನ್ನ ಎದೆಯನ್ನೇ ಸೀಳಿ ಹೊರಬೀಳುವಂತೆ ವೇದನೆಯನ್ನುಂಟುಮಾಡುತ್ತಿದೆ! ತನಗೆ ಇಷ್ಟವಿದ್ದ ವಿಚಾರ ಎಂಬುದಕ್ಕೆ ತನ್ನ ಬುದ್ಧಿ ಅದನ್ನು ಇಲ್ಲದ–ಸಲ್ಲದ ಕಾರಣಗಳನ್ನು ಹುಡುಕಿ ಸಮರ್ಥಿಸುತ್ತಿದೆ.

ತಾನು ಸೋದರತ್ತೆಯ ಮನೆಗೆ ಮೊದಲ ಸಲ ಹೋದಾಗ ರಾಮಣ್ಣ ತನ್ನನ್ನು ಹುಡುಕಿಕೊಂಡು ಬಂದುದು,

ತಾನು ಮನೆಗೆ ಮರಳಿದಮೇಲೆ ರಾಮಣ್ಣ ಮೋಹನನನ್ನು ಮುದ್ದಾಡಿಸಿದ್ದು,

ತನಗೊಮ್ಮೆ ಜ್ವರದ ಸಂಶಯವಿದ್ದಾಗ ರಾಮಣ್ಣ ಕೈಮುಟ್ಟಿ ನೋಡಲು ಹೆದರಿ ಓಡಿ ಡಾಕ್ಟರನ್ನು ಕರೆತಂದದ್ದು,

ತನ್ನೊಡನೆ "ಸಂಸಾರ" ಇಲ್ಲದಿದ್ದರೂ ಇನ್ನೊಂದೆಡೆ ಮನಸ್ಸನ್ನು ಮಾಡದೆ ಇದ್ದುದು,

ಅಂದು ತನಗಾಗಿ ಹೊಸ ಸೀರೆಯನ್ನು ತಂದದ್ದು—

ಒಂದೇ, ಎರಡೇ – ಸಂಶಯಪರ್ವತದ ಶಿಖರ ಉರುಳಿದ್ದಕ್ಕಾಗಿ ಬಂಡೆಗಲ್ಲಿನ ಮೇಲೆ ಬಂಡೆಗಲ್ಲು ಉರುಳಿದಂತೆ ಹಿಂದಿನ ಸ್ಮೃತಿಗಳು ಒಂದರ ಮೇಲೊಂದು ನುಗ್ಗಿ ತನ್ನನ್ನು ಉಸಿರಾಡದಂತೆ ಮಾಡಿವೆ!

ನಿಜ, ತಾನು ರಾಮಣ್ಣನಿಗೆ ಮೊದಲು ಕಾಮುದ ಹೆಣ್ಣು, ತರುವಾಯ ಮದುವೆಯ ಹೆಂಡತಿಯಾದದ್ದು ನಿಜ; ಸಮಾಜದಲ್ಲಿ ಅಂತಹ ನಡತೆಗಾಗಿ ತಿರಸ್ಕಾರವಿದೆ, ಮದುವೆಯಾಗಿರದಿದ್ದರೆ ತಾನು ಸಮಾಜಬಾಹಿರೆಯಾಗುತ್ತಿದ್ದಳು. ಆದರೆ ರಾಮಣ್ಣ ತನ್ನನ್ನು ಮದುವೆಯಾದನಲ್ಲ? ತನ್ನಿಂದ ಒತ್ತಾಯವಿರಲಿಲ್ಲವಲ್ಲ? ತನ್ನನ್ನು ಪ್ರೀತಿಸುತ್ತಿರುವನೆಂದೇ ಯಾಕೆ ತನ್ನನ್ನು ಮದುವೆಯಾಗಿರಬಾರದು? ತನ್ನಮೇಲೆ ಉಪಕಾರ ಮಾಡಬೇಕೆಂದು ಹಾಗೆ ಮಾಡಿದನು ಎಂಬ ಹಟ ಯಾಕೆ? ಹಾಗಿದ್ದರೆ ತನಗಾಗಿಯೆ ಹಂಬಲಿಸುವ ಕಾರಣವಿದ್ದಿರಲಿಲ್ಲವಲ್ಲ? ಅವನ ಜೀವನದಲ್ಲಿ ಇನ್ನೊಂದು ಹೆಣ್ಣಿನ ಸಹವಾಸ

ಇಲ್ಲವೇ ಇಲ್ಲ ಎಂಬುದನ್ನು ತಾನು ಖಚಿತವಾಗಿ ಬಲ್ಲಳು. ನಿಜ, ಮೊದಲು ತಾನು ಕಾಮದ ಹೆಣ್ಣು ಆದಳು.

—ಆದಳು. ಆದರೆ ಅದರಲ್ಲಿ ತಪ್ಪೇನು ?

ಇನ್ನೊಬ್ಬರ ಕೂಡ ವಾದ ಮಾಡಲು ಸಿದ್ಧಳಾದವಳಂತೆ ಮತ್ತೆ ಬಂದು ಕುರ್ಚಿಯಮೇಲೆ ಕುಳಿತಳು.

ಅದರಲ್ಲಿ ತಪ್ಪೇನು ? – ಎಂದು ಕೇಳಿಕೊಂಡಳು ಮತ್ತೊಮ್ಮೆ.

ಇಂದಿನ ಸಮಾಜನೀತಿ ಬದಲಾಗುತ್ತಿದೆ. ಇಂದು ಗಂಡು, ಹೆಣ್ಣು ಮದುವೆಗೆ ಮುಂಚಿತ ಸ್ವತಂತ್ರವಾಗಿ ಬೆಳೆಯುತ್ತಾರೆ, ಸಮಾಜದಲ್ಲಿ ಒಬ್ಬರನ್ನೊಬ್ಬರು ಸಂಧಿಸುತ್ತಾರೆ, ಸ್ನೇಹ ಬೆಳೆಸುತ್ತಾರೆ, ಪರಸ್ಪರ ಪರಿಚಯ ಹೆಚ್ಚಾದಲ್ಲಿ, ಒಮ್ಮೊಮ್ಮೆ ಪರಸ್ಪರ ಹೃದಯಗಳು ಸಮರಸವಾದಲ್ಲಿ ಒಬ್ಬರ-ನ್ನೊಬ್ಬರು ವರಿಸುತ್ತಾರೆ, ಮದುವೆಯ ವಿಧಿಗೆ ಮುಂಚಿತ ಒಮ್ಮೊಮ್ಮೆ ಕಾಮ ಜೀವನದಲ್ಲಿ ಕೂಡಿ ಬಂದರೆ — ತಪ್ಪೇನು ?

ಕುಮುದ ನಡುಗಿದಳು, ಎತ್ತಲಾರದ ಭಾರವನ್ನು ಹೇಗೋ ಎತ್ತಿ ಹಿಡಿದು ನಿಂತವಳಂತೆ, ಅವಳ ಸರ್ವಾಂಗ ನಡುಗಿತು. ತನ್ನ ವಿಚಾರ ಸರಿಯಾದುದೆ ? ಯಾವ ಸಂಬಂಧದಿಂದ ಸಮಾಜದಲ್ಲಿ ಸ್ಥಾನ ಮತ್ತು ಹೊಣೆಗಳ ನಿರ್ಣಯವಾಗುವುದೋ ಆ ಸಂಬಂಧವನ್ನು ಹೀಗೆ ತುಚ್ಛವಾಗಿ ಎಣಿಸುವುದು ಸರಿಯಾದುದೆ ?

ನಿಜವಾದ ಪ್ರೇಮವಿದ್ದಲ್ಲಿ ಕಾಮಜೀವನ ಅಪ್ರಸ್ತುತ ಎನ್ನಿಸಿತು ಕುಮುದಳಿಗೆ. ತನ್ನ ಮತ್ತು ರಾಮಣ್ಣನ ಅನುಭವಗಳನ್ನು ನೆನೆದುಕೊಂಡಳು. ತಾವು ಒಬ್ಬರನ್ನೊಬ್ಬರು ಕೂಡಿದ್ದು ಹೇಗೆ ? ಕಾಮಸಂಭೋಗಕ್ಕಾಗಿ ಅಲ್ಲ; ಒಬ್ಬರು ಇದಿರಿಲ್ಲದಿದ್ದರೆ ಇನ್ನೊಬ್ಬರಿಗೆ ಸಮಾಧಾನವಿರುತ್ತಿರಲಿಲ್ಲ, ಒಬ್ಬರನ್ನು ನೋಡಿದರೆ ಇನ್ನೊಬ್ಬರು ತನ್ನನ್ನು ಮರೆತೇಬಿಡುತ್ತಿದ್ದರು, ಒಬ್ಬರಿಗಾಗಿ ಬೇಕಾದ್ದನ್ನು ವಹಿಸಲು ಇನ್ನೊಬ್ಬರು ಸಿದ್ಧರಾಗಿರುತ್ತಿದ್ದರು, ಒಬ್ಬರ ಸುಖದಿಂದ ಸುಖ ದುಃಖದಿಂದ ದುಃಖ ಎನ್ನಿಸುತ್ತಿತ್ತು ಇನ್ನೊಬ್ಬರಿಗೆ ; ಪರಸ್ಪರ ಹೃದಯಗಳು ಒಂದಾದಾಗ ಪರಸ್ಪರ ದೇಹ ಒಂದಾದುದರ ಎಚ್ಚರ-ವಿಲ್ಲ, ಒಂದಾಗಲೇಬೇಕೆಂಬ ಇಚ್ಛೆ ಇಲ್ಲ, ಒಂದಾಗದೆ ಗತ್ಯಂತರವಿಲ್ಲ !

ಹೃದಯುಗಳು ಹೊಂದಿದವೇಲೆ ಮುಗಿಯಿತು. ಸಮಾಜವು ದೊಡ್ಡ ತಪ್ಪನ್ನು ಮಾಡುತ್ತಿದೆ.

ಹೃದಯು ಒಂದಾಗದೆ ದೇಹ ಒಂದಾಗುವುದು ನಿಜವಾದ ಸೂಳೆಗಾರಿಕೆ; ಮದುವೆಯಾದಲ್ಲೂ ಸೂಳೆಗಾರಿಕೆ ಕಂಡುಬರಬಹುದು.

ಕುಮುದ ಮತ್ತೆ ಎದ್ದಳು, ತನ್ನ ವಿಚಾರಕ್ಕೆ ಗಾಬರಿಗೊಂಡಳು. ಇದೇನು ? ಹತ್ತು ವರ್ಷ ಗಂಡಸಿನ ಸಾನ್ನಿಧ್ಯ ಇಲ್ಲದ್ದಕ್ಕೆ ಹೀಗೆ ವಿಚಾರ ಮಾಡುತ್ತಿರುವೆನೆ ಎಂಬ ಹೆದರಿಕೆಯಾಯಿತು ಅವಳಿಗೆ.

ಹೆದರಿಕೆಯ ಮಗ್ಗುಲಲ್ಲಿಯೇ ಎಲ್ಲಿಂದಲೊ ಆನಂದ ತಲೆ ಎತ್ತಿತು.

ಅಹುದು, ಮೋಹನನನ್ನೂ ಕರೆದುಕೊಂಡೇ ಸಭೆಗೆ ಹೋಗಬೇಕು. ಯಾಕೆ ಬರವೊಲ್ಲನೋ ಮೋಹನ ? ಆದರೂ ಬರುವ ಹೊತ್ತಾಗಿದೆ. ಹೋಗಲಿ, ಸಭೆಗೆ ಅಂತಹ ಅವಸರವಾದರೂ ಏನಿದೆ ? ಮೋಹನ ಬಂದ ಮೇಲೆ, ಅವನನ್ನೂ ಕರೆದುಕೊಂಡೇ ಹೋದರಾಯಿತು.

ಆದರೆ––

ಕುಮುದ ಒಮ್ಮೆಲೆ ಗಡಿಬಿಡಿಯಲ್ಲಿ ತೊಡಗಿದಳು. ಇಂತಹ ಸಭೆ, ಇಷ್ಟು ಜನ ಬರುವವರು, ಆದರೆ ರಾಮಣ್ಣ ಸರಿಯಾದ ಬಟ್ಟೆಗಳನ್ನು ತೊಟ್ಟಿರುವನೆ ? ತೊಟ್ಟಿರಲಿಕ್ಕಿಲ್ಲ ಎಂದು ದೃಢವಾಗಿ ನಂಬಿದಳು. ಹುಂ–ಗಂಡಸಿನ ಸ್ವಭಾವವೇ ಹೀಗೆ. ಇಲ್ಲ, ಇಂದಾದರೂ ಸರಿಯಾದ ಬಟ್ಟೆಗಳನ್ನು ತೊಡಲೇಬೇಕು ರಾಮಣ್ಣ – ಎಂದು ಬಟ್ಟೆಗಳನ್ನು ಶೋಧಿಸತೊಡಗಿದಳು–ಆಗ ಆಕೆಯ ಲಕ್ಷ್ಯಕ್ಕೆ ಬಂದಿತು, ತನ್ನ ಕಾಲ್ಗಳು, ಕೈಗಳು ನಡುಗುತ್ತಿವೆ, ಉಸಿರಿನ ಒತ್ತಡ ಹೆಚ್ಚಾಗಿದೆ ಎಂದು.

ಆದರೆ ಅದನ್ನು ಲಕ್ಷ್ಯಕ್ಕೆ ತಂದುಕೊಳ್ಳಬಾರದೆಂಬ ಹಟದಿಂದೆನ್ನುವಂತೆ ಡ್ರಾಯರುಗಳನ್ನು ಸದ್ದು ಮಾಡುತ್ತ ಎಳೆದಳು, ಮುಚ್ಚಿದಳು – ಬಟ್ಟೆಗಳನ್ನು ಶೋಧಿಸಬೇಕೆಂದು.

## ೧೪

ಏನಿದು ಸದ್ದು ? ರಾಮಣ್ಣ ಚಟ್ಟನೆ ಎದ್ದ. ಓ – ಕೆಳಗೆ ! ಆದರೆ ಈ ರೀತಿ ಬಡೆಯುವುದೇಕೆ ? ಮೆಟ್ಟಲುಗಳ ಕಡೆ ನಡೆದ ರಾಮಣ್ಣ ವಿಚಾರ

ಬದಲಾಯಿಸಿ ತಡೆದು ನಿಂತ. ಕೈಚಲ್ಲಿ ಉಸುರ್ಗರೆದ. ಯಾರಿಗೆ ಗೊತ್ತು? ಕುಮುದ ಸಿಟ್ಟಿಗೆದ್ದರೂ ಎದ್ದಿರಬಹುದು. ತನ್ನೊಡನೆ ಸಭೆಗೆ ಬರಬೇ-ಕಾಯಿತಲ್ಲ – ಎಂದು –

ಯಾಕೆ ?—ರಾಮಣ್ಣ ತನ್ನಷ್ಟಕ್ಕೇ ಮುಗುಳ್ನಗೆ ನಕ್ಕ–ಸಿಟ್ಟಿಗೆದ್ದರೇನೆ ಕುರ್ಚಿ–ಮೇಜು–ಡ್ರಾಯರುಗಳನ್ನು ಬಡಿಯಬೇಕೆಂದು ನಿಯಮವಿದೆಯೇ? ಉತ್ಸಾಹದಿಂದಲೂ ಹಾಗೆ ಮಾಡಬಹುದು, ಅಸಹನೀಯ ಆತುರತೆಯಿಂದಲಿ ಹಾಗೆ ಮಾಡಬಹುದು, ಇನ್ನೂ ಬೇಕಾದ ಕಾರಣಕ್ಕಾಗಿ ಹಾಗೆ ಮಾಡ-ಬಹುದಲ್ಲ ?

ಕುಮುದ ಸಿಟ್ಟಿಗೆದ್ದಿಲ್ಲ ಎಂದು ತಿಳಿದು ಸಮಾಧಾನದಿಂದ ಕುಳಿತು ಕೊಂಡರಾಯಿತು–ಎಂದ. ಅದೊ ! ಸದ್ದೂ ಶಾಂತವಾಗುತ್ತಿದೆ. ರಾಮಣ್ಣ ಕುಳಿತುಕೊಳ್ಳಬೇಕೆನ್ನುವಾಗ ಮತ್ತೊಮ್ಮೆ ಕಿಟಕಿಯಿಂದ ಹೊರಗೆ ನೋಡಿ ಕುಳಿತುಕೊಂಡ....ಹುಂ....ಈ ಸ್ವಾಗತ ಸಮಿತಿ ಬೇಗ ಬಂದರೇನೇ ಒಳಿತು. ಯಾಕೊ ಒಂದು ತರದ ಹುರುಹುರು ಎನ್ನಿಸುತ್ತಿದೆ ಹೃದಯದೊಳಗೆ. ಏನೊ ಅನಿರೀಕ್ಷಿತ ಘಟನೆಯಾಗಬಹುದೇನೊ ಎಂಬ – ಒಮ್ಮೊಮ್ಮೆ ಹಿಗ್ಗು, ಒಮ್ಮೊಮ್ಮೆ ಹೆದರಿಕೆ.

ಮನುಷ್ಯನ ಮನಸ್ಸೇ ವಿಚಿತ್ರವಾಗಿದೆಯಲ್ಲ ? ಜಗತ್ತಿನ ನಾಶವನ್ನು ಒಂದೇಟಿನಲ್ಲಿ ಮಾಡಬಲ್ಲ ಅಣುಬಾಂಬನ್ನು ಹುಡುಕುವ ಮನುಷ್ಯನು ಮನಸ್ಸಿನ ಬಗ್ಗೆ ಶೋಧವನ್ನು ಮಾಡಬಾರದೆ ? ಅಥವಾ – ಅದನ್ನು ಮಾಡದೆ ಅಣುಬಾಂಬದ ಶೋಧವನ್ನೇ ಬಯಸುವುದು ಮನಸ್ಸು, ಎಂಬುದಕ್ಕಾಗಿ ಅದೊಂದು ಭವಭೂತಿ ಹೇಳುವ ಹಾಗೆ "ಕಿಮಪಿ ಕಿಮಪಿ" – ಏನೊ ಏನೊ ಒಂದು ರಹಸ್ಯ ಎನ್ನಬೇಕೆ ?

ಈಗ ತಾನು ಹೆದರಿದ್ದನಲ್ಲ ? ಅದೆಂತಹ ಮೋಜು ! ಕುಮುದ ಸಿಟ್ಟಾಗಿದ್ದಾಳೆ ಎಂದು ತಿಳಿದ. ಯಾಕೆ ? ತಾನು ಕುಮುದಳಿಗೆ ಹೆದರು-ತ್ತಾನೆಂದು. ತಾನು ಕುಮುದಳೊಡನೆ ಮೊದಲಿನಂತೆಯೆ ಇದ್ದರೆ ಆಕೆ ಮಾಡುವ ಅದೇ ಡ್ರಾಯರುಗಳ ಸದ್ದನ್ನು ಕೇಳಿ "ಕುಮುದ ಉಲ್ಲಾಸ-ದಲ್ಲಿದ್ದಾಳೆ" ಎಂದು ತಿಳಿಯುತ್ತಿದ್ದ. ನಡೆಯುವ ಘಟನೆಗಳು ನಡೆದೇ ನಡೆಯುವುವು, ಅವುಗಳ ಅರ್ಥ ತನ್ನ ಮನಃಸ್ಥಿತಿಯನ್ನು ಅವಲಂಬಿಸಿದೆ !

ಎಂದರೆ ?

ರಾಮಣ್ಣ ಏಕಚಿತ್ತತೆಯಿಂದ ವಿಚಾರ ಮಾಡುವವನಂತೆ ಎಡಗೈ ಹೆಬ್ಬೆರಳು – ನಡುವಿನ ಬೆರಳುಗಳಿಂದ ಗಂಡಸ್ಥಲಗಳನ್ನು ಗಟ್ಟಿಯಾಗಿ ಹಿಡಿದುಕೊಂಡು ಕಣ್ಣುಮುಚ್ಚಿದ.

ಘಟನೆಯ ಅರ್ಥ ಮನಃಸ್ಥಿತಿಯನ್ನವಲಂಬಿಸಿದೆ.

ಎಂದರೆ—?

ಮನಃಸ್ಥಿತಿಯನ್ನು ಹತೋಟಿಯಲ್ಲಿಟ್ಟುಕೊಂಡರೆ ಘಟನೆ ಅನುಕೂಲ ವೆನ್ನಿಸಬಹುದು ?

ಕುಮುದಳನ್ನು ಸರಿಯಾಗಿ ತಿಳಿದುಕೊಂಡರೆ ಅವಳೂ—?

ಉಹುಂ.... ಇದೇನೋ ವಿಚಾರಗೊಂದಲವಾಯಿತು – ಎಂದುಕೊಂಡ.

ಆದರೂ ಇಂದಿನ ಸಂದರ್ಭದಲ್ಲಿ ಏನೋ ಅನಿರೀಕ್ಷಿತ ಘಟನೆ ನಡೆಯ-ಬಹುದಾಗಿದೆ – ಎಂದೆನ್ನಿಸಿತು. ಯಾಕೆ ? ಯಾಕೇನು ? ಎನ್ನಿಸಿದೆ, ಹೇಳಲು ಬರುವಂತಿಲ್ಲ ; ಕಾರಣ ತಿಳಿಯಲೊಲ್ಲದು, ಕಾರ್ಯದ ಕಲ್ಪನೆ ಇದೆ.

ಹಾಗೆ ನಿಜವಾಗಿಯೆ ಆದರೆ ? ಕುಮುದ ತನ್ನನ್ನು ಸರಿಯಾಗಿ ತಿಳಿದುಕೊಂಡರೆ ! ಹುಂ – ಅಂತೂ ಹೊಣೆಯನ್ನು ಇನ್ನೊಬ್ಬರ ಮೇಲೆಯೆ ಹೊರಿಸುತ್ತಿರುವೆನಲ್ಲ ? ನಾನೇ ತಪ್ಪಿರಬಾರದೇಕೆ ? ಕುಮುದಳನ್ನು ನಾನು ನಿಜವಾಗಿ ಪ್ರೀತಿಸುತ್ತಿದ್ದರೆ ಈ ಅಧೈರ್ಯ ಯಾಕೆ ? ತನ್ನ ಪ್ರೇಮದ ಬಗ್ಗೆ ಆಕೆಯಲ್ಲಿ ಭರವಸೆಯನ್ನು ಹುಟ್ಟಿಸಬಹುದಲ್ಲ ?

ಕುಮುದಳಿಗೆ ತಾನು ಪ್ರಾಣ ಎಂಬುದರ ಬಗ್ಗೆ ರಾಮಣ್ಣನಿಗೆ ಸಂದೇಹವೆ ಇರಲಿಲ್ಲ. ಅಂದು, ಮದುವೆಯ ಮುಂಚಿತ, ಆಕೆ ತನ್ನವ-ಳಾದಂದಿನಿಂದ ತನಗೆ ಆ ಭರವಸೆ ಇದೆ. ಆದರೂ ಇಂದು ತನ್ನೊಡನೆ – ವರ್ಷಾನುವರ್ಷಗಳವರೆಗೆ – ಅಸಹಕಾರದ ಸಂಸಾರವನ್ನು ನಡೆಸಿದ್ದಾಳೆ.

ಎಂತಹ ತ್ಯಾಗ ಆಕೆಯದು ! ಆದರೆ ಸುಖವಿದೆಯೆ ಆಕೆಗೆ ಆ ತ್ಯಾಗದಲ್ಲಿ ? ತನಗೂ ಆಕೆಗೂ ವಯಸ್ಸಿನಲ್ಲಿ 14–15 ವರ್ಷಗಳ ಅಂತರ.... ಛೀ ! ಮತ್ತೆ ತನ್ನ ಮನಸ್ಸು ಅದೇ ದಾರಿಯನ್ನು ಹಿಡಿಯಿತು. ವೈವಾಹಿಕ ಜೀವನದಲ್ಲಿ ಸುಖ ಎಂದರೆ ಕಾಮಜೀವನದ ತೃಪ್ತಿ ಎಂದೇ ತನಗೆ ವಿಚಾರ....

ವಿಚಾರ ತನ್ನದಲ್ಲ, ಸಾವಿರಾರು ವರ್ಷಗಳಿಂದ ನಡೆದುಬಂದ ಸಂಪ್ರದಾಯದ ವಿಚಾರ ತನ್ನಲ್ಲಿ ಮೈಗೂಡಿಕೊಂಡು ಬಂದಿದೆ. ಅಥವಾ ನಿಸರ್ಗದಲ್ಲಿ ಪ್ರತಿಯೊಂದು ಗಂಡುಪ್ರಾಣಿಯ ವಿಚಾರವೊ ಇದು? ಇದ್ದರೂ ಇರಬಹುದು. ಕಾಮಜೀವನವು ಗಂಡಿಗೆ ಕೇವಲ ಒಂದು ತೃಪ್ತಿಯಾಗಿದೆ, ಅವರ ಜೊತೆ ಯಾವ ಹೊಣೆಯೂ ಇಲ್ಲ. ಹೆಣ್ಣಿನ ಮಾತು ಬೇರೆ; ಕಾಮಜೀವನ ಹೊಸದೊಂದು ಹೊಣೆಯನ್ನೇ ತಂದುಕೊಡುವುದು. ಗಂಡಿನ ಕಾಮಜೀವನ ಇರುಳುಗಳ್ಳನಂತೆ – ಮಾಡಿದ್ದನ್ನು ಮುಚ್ಚಿಡಬಹುದು; ಹೆಣ್ಣಿನ ಕಾಮ ಜೀವನ ಹಗಲು-ಗಳ್ಳನಂತೆ, ಮಾಡಿದ್ದನ್ನು ಮುಚ್ಚಿಡಲು ಶಕ್ಯವೇ ಇಲ್ಲ. ಕಾಮಜೀವನದ ಬಗ್ಗೆ ಗಂಡು-ಹೆಣ್ಣುಗಳ ವಿಚಾರವೆ ಬೇರೆಯಾಗಿದ್ದರೆ ? ಪರಸ್ಪರ ಭಿನ್ನವಾಗಿದ್ದರೆ ?

ಈ ವಿಚಾರ ಈಗ್ಯಾಕೆ – ಎಂದುಕೊಂಡ. ಹತ್ತು ವರ್ಷಗಳಾದುವು ತನ್ನ ಕಾಮಜೀವನ ತಡೆದುನಿಂತುದಕ್ಕೆ.

ಓ ! ರಾಮಣ್ಣನಿಗೆ ತಟ್ಟನೆ ಹೊಸತೊಂದು ವಿಚಾರ ಹೊಳೆಯಿತು. ತನ್ನ ಬೆನ್ನನ್ನು ತಾನೇ ತಟ್ಟಿಕೊಂಡ. ಕೂಡಲೆ ಸುತ್ತಲು ನೋಡಿದ, ನಾಚಿದವನಂತೆ. ಯಾರಾದರೂ ನೋಡಿದ್ದರೆ ನನ್ನನ್ನು ಹುಚ್ಚನೆನ್ನಬಹುದಿತ್ತು – ಎಂದುಕೊಂಡ.

ಆದರೂ ಇದು ಬೆನ್ನನ್ನು ತಟ್ಟಿಕೊಳ್ಳುವಂತಹದೆ ಮಾತು – ಎಂದು ಮತ್ತೊಮ್ಮೆ ಹೇಳಿಕೊಂಡ.

ಹತ್ತು ವರ್ಷಗಳಾದುವು ತಾನು ಬ್ರಹ್ಮಚರ್ಯದ ಜೀವನವನ್ನು ನಡೆಯಿಸಿ.

ಆದರೆ ಈ ಇಡಿಯ ಅವಧಿಯಲ್ಲಿ ತನಗೆ ಕುಮುದಳನ್ನು ಬಿಟ್ಟು ಬೇರೆ ಬಯಕೆಯೆ ಇಲ್ಲವಲ್ಲ !

ತಾನು ಕುಮುದಳನ್ನು ಪ್ರೀತಿಸುತ್ತೇನೆ ಎಂಬುದಕ್ಕೆ ಬೇರೆ ಕಾರಣ ಅಗತ್ಯವಿದೆಯೆ ?

ರಾಮಣ್ಣನಿಗೆ ಒಂದು ಕ್ಷಣ ತಲೆಯಲ್ಲಿ ವಿಚಾರಗಳ ಗೊಂದಲವಾದಂತಾಯಿತು. ನಿಜವೆ? ಇಷ್ಟು ಸುಲಭವಾಗಿ ತಾನು ಕುಮುದಳ ಪ್ರಶ್ನಕ್ಕೆ

ಉತ್ತರವನ್ನು ಕೊಡಬಲ್ಲನೆ ? ಇದೊಂದು ಮಾತಿಗೆ ಕುಮುದಳಿಗೆ ಸಮಾಧಾನ ವಾಗಬಹುದೆ ?

ರಾಮಣ್ಣನು ನಿರಾಶೆಯಿಂದ ಉಸುರ್ಗರೆದನು. ಹುಚ್ಚ, ಹುಚ್ಚ ತಾನು. ಅಥವಾ, ಅಷ್ಟೊಂದು ಮುಗ್ಧನೆ ? ಇಂತಹ ಮಾತಿಗೆ, ಕುಮುದ ಳಂತೂ ಇರಲಿ ಬೇರೆ ಯಾವ ಹೆಂಗಸು ಸಮಾಧಾನವನ್ನು ಪಡೆಯಬಹುದು? ಕೊನೆಗೆ, ತನ್ನನ್ನು ಹಟಮಾರಿ ಎನ್ನಬಹುದಲ್ಲ ? ನಿಜ, ಇಂತಹದೆ ತಿನಿಸು ಬೇಕು ಎಂದು ಹಟ ಹಿಡಿದ ಹಡುಗನಿಗೆ ಬೇರೆ ಯಾವುದರ ಮೇಲೂ ಆಸೆ ಇಲ್ಲವೆಂತಲ್ಲ; ತಾನು ಬಯಸಿದ್ದು ದೊರಕಲಿಲ್ಲವೆಂದರೆ ಅವನು ಇಡಿಯ ದಿವಸ ಬೇರೆ ಯಾವುದನ್ನೂ ತಿನ್ನದೆ ಉಪವಾಸದಿಂದಿರುವನು. ಆದರೆ ಅಷ್ಟಕ್ಕೆ ಆ ಹುಡುಗನಿಗೆ ಆ ತಿನಿಸಿನ ಮೇಲೆ ಅನನ್ಯಪ್ರೀತಿ ಇದೆ ಎಂದು ಯಾರಾದರೂ ಹೇಳಬಹುದೆ ?

ತಾನು ಹಟಮಾರಿ ಹುಡುಗ – ಅಲ್ಲಲ್ಲ, ಹಾಗೆನ್ನಬಹುದು ಕುಮುದ ತಾನು ಆಕೆಯೊಡನೆ ವಾದಿಸಹೊರಟರೆ. ಆದರೂ ಈಗ ತನ್ನ ಮಟ್ಟಿಗೆ ಭರವಸೆಯಾಗಿದೆಯಲ್ಲ ? ಕುಮುದಳನ್ನು ತಾನು ಹೃದಯಪೂರ್ಣವಾಗಿ ಪ್ರೀತಿಸುತ್ತಾನೆ ಎಂಬುದರಲ್ಲಿ ಸಂಶಯವಿಲ್ಲ. ಎಂದರೆ ? ಇದಕ್ಕೂ ಮುಂಚಿತ ತನಗೆ ಸಂಶಯವಿದ್ದಿತೆ ? ಛೆ ! ತನಗೆ ಸಂಶಯವೆ ಇದ್ದಿರಲಿಲ್ಲ. ಎಂದರೆ—?

ರಾಮಣ್ಣ ಸಿಟ್ಟಿನಿಂದ ತಲೆಯನ್ನು ಜಾಡಿಸಿದ, ಒಳಗೆ ಹರಡುತ್ತಿರುವ ಗೊಂದಲ ಹೊರಬೀಳಬಹುದು ಎಂದು ತಿಳಿದುಕೊಂಡವನಂತೆ. ಕುಮುದ ಳನ್ನು ತಾನು ಪ್ರೀತಿಸುತ್ತಿರುವ ಬಗ್ಗೆ ತನಗೆ ಎಂದೂ ಸಂಶಯವಿದ್ದಿಲ್ಲ, ಎಂದು ಹಟದಿಂದ ಹೇಳಿಕೊಂಡ. ಹಾಗಿದ್ದರೆ ಬೆನ್ನು ತಟ್ಟಿಕೊಂಡುದು ಯಾಕೆ ?

ಹಂ – ತಿಳಿಯಿತು ! ಕುಮುದಳಿಗೆ ಮನವರಿಕೆ ಮಾಡಿಕೊಡಬಲ್ಲ ಈಗ ತಾನು ಎಂಬುದಕ್ಕಾಗಿ ಬೆನ್ನನ್ನು ತಟ್ಟಿಕೊಂಡಿದ್ದು. ಅಹುದು, ಆ ವಿಚಾರದಿಂದ ನನಗೆ ಧೈರ್ಯ ಬಂದಿತು – ಎಂದುಕೊಂಡ. ಕುಮುದಳ ಹೊರತಾಗಿ ಅನ್ಯಳನ್ನು ತಾನು ಕನಸು – ಮನಸುಗಳಲ್ಲಿ ಬಯಸಿಲ್ಲ ಎಂದು ಹೇಳಿಬಿಟ್ಟರೆ........

—ಎಂದು ಹೇಳಿಬಿಟ್ಟರೆ ತಾನೇನೊ ತನ್ನ ಕರ್ತವ್ಯ ಮಾಡಿ ಕೃತಕೃತ್ಯ

ಎನ್ನಿಸಬಹುದು, ಆದರೆ ಕುಮುದಳಿಗೆ ವಿಶ್ವಾಸವಾಗುವುದೆಂದು ಹೇಳುವುದು ಹೇಗೆ? ತಾನು ಯಾವ ಹೊಸಮಾತನ್ನು ಆಕೆಗೆ ಹೇಳುವನೆಂದು ಆಕೆ ವಿಶ್ವಾಸವನ್ನಿಡಬೇಕು? ಕುಮುದಳಿಗೆ ಗೊತ್ತಿಲ್ಲವೆ ತನ್ನ ನಡತೆ? ತಾನು ಬೇರೆ ಯಾವ ಹೆಣ್ಣನ್ನೂ ಬಯಸಿಲ್ಲ ಎಂಬುದನ್ನು ಕಂಡು, ಅರಿತು ಕೂಡ ಕುಮುದಳು ತನಗೆ ವಿಮುಖಳಾಗಿದ್ದಾಳೆ. ದುಷ್ಯಂತ – ಶಕುಂತಲೆಯರ ಕತೆ ಆಗುವುದು ಇದೂ. ವ್ಯತ್ಯಾಸವಿಷ್ಟೆ, ನಾಟಕದಲ್ಲಿ ಶಕುಂತಲೆಗೆ ಆದ ಅವಸ್ಥೆ ಇಲ್ಲಿ ದುಷ್ಯಂತನಿಗೆ – ತನಗೆ – ಆಗುವುದು. ಪಾಪ! ಏನಾಯಿತು ಆಕೆಯ ಅವಸ್ಥೆ? ಜೊತೆಯಲ್ಲಿ ಬಂದ ಹಿರಿಯರು, ಬಾಂಧವರು ಎಲ್ಲರೂ ಹೇಳಿದರು ದುಷ್ಯಂತನಿಗೆ, "ಈಕೆ ನಿನ್ನ ಮದುವೆಯ ಹೆಂಡತಿ; ನಿನ್ನ ಮಗುವನ್ನು ತಳೆದಿದ್ದಾಳೆ; ಈಕೆಯನ್ನು ನಿನಗೆ ಒಪ್ಪಿಸುತ್ತೇವೆ; ಎಷ್ಟು ಕಾಲ ತಾನೇ ಈಕೆ ತವರು ಮನೆಯಲ್ಲಿರಬಹುದು; ಆದ್ದರಿಂದ ಈಕೆಯನ್ನು ಸ್ವೀಕರಿಸು" ಎಂದು. ಹೆಣ್ಣೇನೋ ಸ್ವೀಕರಿಸಲು ಯೋಗ್ಯ-ವಾಗಿದೆ ಎಂದ ದುಷ್ಯಂತ. ಆದರೆ ಆಕೆಯನ್ನು ತಾನು ಮದುವೆಯಾದದ್ದೆ ಅವನಿಗೆ ಸ್ಮೃತಿಯಿರಲಿಲ್ಲ. "ನಾನು ಆಕೆಯನ್ನು ವರಿಸಿದಂತೆ ನನ್ನ ಲಕ್ಷ್ಯದಲ್ಲಿಲ್ಲ. ಆದ್ದರಿಂದ ಸ್ವೀಕರಿಸಲಾರೆ" ಎಂದ. ಆಗ "ನೀನೇ ಅವನಿಗೆ ವಿಶ್ವಾಸವಾಗುವಂತೆ ಹೇಳು" ಎಂದರು ಬಾಂಧವರು ಶಕುಂತಲೆಗೆ. ಆಕೆ ಪ್ರಾರಂಭಿಸಿದಳು— "ಒಂದು ದಿನ ನವಮಾಲಿಕಾ ಮಂಟಪದಲ್ಲಿ ನೀನು ಕಮಲದ ಎಲೆಯಲ್ಲಿ ನೀರನ್ನಿಟ್ಟು ದೀರ್ಘಾಪಾಂಗ ಎಂಬ ಚಿಗುರೆ ಮರಿಗೆ ಕುಡಿಸಬೇಕು ಎಂದೆ. ನೀನು ಎಷ್ಟು ಪ್ರಯತ್ನಪಟ್ಟರೂ ಅದು ಕುಡಿಯಲಿಲ್ಲ. ಆಗ ನಾನು ನಿನ್ನ ಕೈಯೊಳಗಿನ ನೀರಿನ ದೊನ್ನೆಯನ್ನು ನನ್ನ ಕೈಯಲ್ಲಿ ಹಿಡಿದೆ, ಮರಿ ತಟ್ಟನೆ ಬಂದು ಕುಡಿಯಿತು. ಆಗ ನೀನೂ 'ಎಲ್ಲರೂ ತಂತಂ ಜನರಲ್ಲಿ ವಿಶ್ವಾಸ ಇಡ್ತಾರೆ' ಎಂದು ನಕ್ಕೆ." ಪಾಪ! ಆ ಕತೆಯಿಂದ ದುಷ್ಯಂತನಿಗೆ ವಿಶ್ವಾಸವಾಗಬಹುದೆಂಬ ಆಸೆಯಿಂದ ಅದನ್ನು ಮುಗಿಸುವಾಗ ಶಕುಂತಲೆಯೂ ನಗೆಯನ್ನು ಬೀರಿದ್ದಳೇನೊ! "ಕಥೆ ಚೆನ್ನಾಗಿದೆ, ಹೆಂಗಸರು ಸುಳ್ಳನ್ನು ಸವಿ ಮಾಡಿ ಹೇಳಬಲ್ಲರು ಅನ್ನೋದನ್ನ ತೋರಿಸಿಕೊಡ್ತದೆ" ಎಂದ ದುಷ್ಯಂತ!

ಸರಿ – ನನ್ನ ಅವಸ್ಥೇನೂ ಹಾಗೇ ಆಗಬಹುದಲ್ಲ? "ಬೇರೆ ಹೆಣ್ಣನ್ನು

ಬಯುಸಿಲ್ಲ ಅನ್ನೋದು ಬ್ರಹ್ಮಚರ್ಯಾನೊ ವಯಸ್ಸಾದ ಲಕ್ಷಣಾನೋ ?" ಎಂದುಬಿಟ್ಟರೆ? ಅತ್ಯಂತ ಕಳವಳವಾಯಿತು ರಾಮಣ್ಣನಿಗೆ. ಸತ್ಯದಲ್ಲಿ ವಿಶ್ವಾಸ ಹುಟ್ಟಿಸೋದು ಸುಲಭ ಅಲ್ಲ ಅಂದ್ರೆ – ಅದರ ಮುಂದೆ ಬೇರೆ tragedy ಯಾವುದು?—ಎಂದ. tragedy ಅನ್ನೋ ಶಬ್ದ ಇಲ್ಲ, ನಮ್ಮ ಸಂಪ್ರದಾಯದೊಳಗೆ, ಅದಕ್ಕೆ "ದುರ್ದೈವ" ಅಂದುಕೊಳ್ಳೋಣ–ಎಂದು ಉಸುರ್ಗರೆದ.

ಅಲ್ಲ – ಈಗ ಏನೋ ಒಂದು ವಿಚಾರ ಬಂದಿತ್ತಲ್ಲ ದೈವದ ಸಂದರ್ಭ-ದಲ್ಲಿ ? ಏನೊ – ಏನೊ – ವಿಚಾರ ಏನೇ ಇರಲಿ, "ದೈವ" ಅನ್ನೋದು ಹೊಣೆ ಹಾರಿಸಿಕೊಂಡ್ಹಾಂಗೆ. ನನ್ನ ಹೊಣೆ ಏನು ? ನಾನು ಕುಮುದಳನ್ನ ಪ್ರೀತಿಸ್ತೀನಿ, ಆದರೆ ಆಕೆಗೆ ಆ ವಿಶ್ವಾಸ ಇಲ್ಲ, ಇದರೊಳಗ ನನ್ನ ಹೊಣೆ ಏನು ? ಆಕೆಗೆ ವಿಶ್ವಾಸ ಹುಟ್ಟುವ ಹಾಗೆ ಏನು ಹೇಳಬೇಕು ? ಹ್ಯಾಗೆ ಹೇಳಬೇಕು ? ಉಹುಂ, ಅದು ನನ್ನ ಹೊಣೆ ಅಲ್ಲ. ಕುಮುದಳನ್ನು ನಾನು ಪ್ರೀತಿಸ್ತೀನಿ ಅನ್ನೋ ನನ್ನ ಹೃದಯುದ ವಿಶ್ವಾಸವನ್ನು ನಂಬಿಕೊಂಡು ಅಚಲನಾಗಿರುವುದೆ ನನ್ನ ಹೊಣೆ.

ಭಲೆ ! ಕೈಕಟ್ಟಿಕೊಂಡು ಸುಮ್ಮನಿರೋದೇ ನನ್ನ ಹೊಣೆ ಅನ್ನೋ "ದೊಡ್ಡ ಸಿದ್ಧಾಂತಕ್ಕೆ ಬಂದುಬಿಟ್ಟೆನಲ್ಲ —" ಎಂದು ತನ್ನನ್ನು ತಾನೇ ಹಂಗಿಸಿಕೊಂಡ ರಾಮಣ್ಣ. ಕೈಕಟ್ಟಿಕೊಂಡು ಕೂಡದೆಯೆ ನಾನೇನು ಮಾಡಬಲ್ಲೆ – ಎಂದು ಕೇಳಿಕೊಂಡ.

ಈ ವಿಷಯುವೆ ಅಂತಹುದು. "ನಿನ್ನ ಮೇಲೆ ನನ್ನ ಪ್ರೀತಿ ಇದೆ" ಎಂದರೆ ಯಾರು ಆ ಮಾತನ್ನು ನಂಬುವರು ? "ಪ್ರೀತಿ ಇದೆ" ಎನ್ನೋ ವಿಶ್ವಾಸ ಸ್ವಂತ ಅನುಭವದಿಂದಲೆ ಬರಬೇಕಲ್ಲದೆ ಬಾಯ್ಮಾತಿನಿಂದ ಹೇಳಿದರೆ ನಂಬುವಂತಹುದಲ್ಲ. ಕತೆ – ಕಾದಂಬರಿ – ನಾಟಕಗಳಲ್ಲಿ ಬರೀತಾರೆ "ಪ್ರಿಯೇ, ನಿನ್ನನ್ನು ಪ್ರೀತಿಸುತ್ತೇನೆ" ಎಂದು ನಾಯಕ, "ಪ್ರಿಯಾ, ನಿನಗಾಗಿ ನನ್ನ ಹೃದಯ ಮೋಹಿತವಾಗಿದೆ"ಎಂದು ನಾಯಿಕೆ. ವ್ಯವಹಾರ-ದಲ್ಲೂ ಇಷ್ಟೆ ಸುಲಭವಿದ್ದರೆ ಕ್ಷಣಕ್ಕೊಂದು ಪ್ರೇಮವಿವಾಹ, ಬೇರೆ ಬೇರೆ ಕ್ಷಣಕ್ಕೆ ಬೇರೊಬ್ಬಳೊಡನೆ ಪ್ರೇಮ ವಿವಾಹ ನಡೆಯುಬಹುದು. ತಾನೂ ಸಾಹಿತಿ, ತನಗೂ ಮನುಷ್ಯ ಸ್ವಭಾವ ಅಷ್ಟರಮಟ್ಟಿಗೆ ಗೊತ್ತಿದೆ, ಎಂದು-ಕೊಂಡ ರಾಮಣ್ಣ. ತಾನು ಬಯುಸಿದ ಹೆಣ್ಣನ್ನು ತಾತ್ಪೂರ್ತಿಕವಾಗಿ

"ಪ್ರೀತಿ"ಸುವುದು ಗಂಡು ಪ್ರಾಣಿಯ ನೈಸರ್ಗಿಕ ಸ್ವಭಾವವಾಗಿದೆ; ತಾಯ್ತನ ಪ್ರಾಪ್ತವಾದೊಡನೆ "ಪ್ರೀತಿ"ಸಿದ ಗಂಡನ್ನು ಪೂರ್ತಿಯಾಗಿ ಮರೆತುಬಿಡುವುದು ಹೆಣ್ಣು ಪ್ರಾಣಿಯ ನೈಸರ್ಗಿಕ ಸ್ವಭಾವವಾಗಿದೆ. ಮಾನವ ಪ್ರಾಣಿಗಳಲ್ಲೂ ಈ ಸ್ವಭಾವ ಸಾಮಾನ್ಯವಾಗಿದೆ. ಆದರೆ ಕುಟುಂಬ ಜೀವಿಯಾದ ಮಾನವಪ್ರಾಣಿಗೆ ಯಾವಾಗಲೂ ತನಗೆ ಇಷ್ಟವಾದ ಜೊತೆ ಬೇಕು ಎಂಬ ವಿಚಾರವಿದೆ. ಆ ಸಂದರ್ಭದಲ್ಲಿ ಹುಟ್ಟಿದೆ ಇನ್ನೊಂದು ತರದ "ಪ್ರೀತಿ"ಯ ಕಲ್ಪನೆ. ಆ—

ರಾಮಣ್ಣ ತಟ್ಟನೆ ಕೈಗಡಿಯಾರವನ್ನು ನೋಡಿಕೊಳ್ಳುತ್ತ ಎದ್ದ. ಯಾಕೊ, ಇಂದು ವಿಚಾರಗಳ ಹಬ್ಬವಾಗಿದೆಯೇನೊ! ಹಬ್ಬವೇನು ಸುಟ್ಟೀತು, ಹೋಳೀ ಹುಣ್ಣಿಮೆ, ಮನಬಂದಂತೆ, ಕುಣಿಯುತ್ತಿವೆ –ಎಂದುಕೊಂಡ ಸಿಡುಕಿನ ಮುಖಮುದ್ರೆಯಿಂದ.

ಈ ಹಾಳು ಸಭೆ ಬೇಗ ಪ್ರಾರಂಭವಾಗಬಾರದೆ?

ಹಂ—ನೋಡಿದೆಯಾ? ಯಾವುದರ ಸಿಟ್ಟನ್ನು ಯಾವುದರ ಮೇಲೆ ಹಾಯಿಸುತ್ತಿರುವೆ!

ರಾಮಣ್ಣ ದಣಿದವನಂತೆ ಮೆಲ್ಲನೆ ನಕ್ಕುಬಿಟ್ಟ. ಇಷ್ಟಾದರೂ ಮನಸ್ಸಿನಲ್ಲಿ ಯಾವುದೋ ಒಂದು ಅನಿರೀಕ್ಷಿತ ಉಲ್ಲಾಸವಿದೆ, ಎಂಬ ವಿಚಾರ ಅವನನ್ನು ಬಿಡಲೊಲ್ಲದು. ಯಾವುದು ಅಂತಹ ಉಲ್ಲಾಸ? ಹತ್ತು ವರ್ಷಗಳ ತಪಶ್ಚರ್ಯೆಗಾಗಿ ಮೋಕ್ಷ—ಅಲ್ಲಲ್ಲ, ತಪಶ್ಚರ್ಯೆಯಿಂದ ಮೋಕ್ಷ ದೊರೆಯುವುದೆ? ಕುಮುದಳ ಹೊರತಾಗಿ ನನಗೆ ಬೇರೊಂದು ಪ್ರಿಯವಾದುದಿಲ್ಲ, ಅವಳು ಸುಖದಿಂದಿದ್ದರೆ ಸಾಕು, ಅವಳು "ನನ್ನವಳಾ"ಗಲಿ ಎಂಬ ಹಟ ಕೂಡ ನನಗಿಲ್ಲ—

ಹಂ–ಹಂ–ತಡೆ! ಇದೇನು ವೈರಾಗ್ಯದ ಸಿದ್ಧತೆಯೊ? ವಾರ್ಧಿಕ್ಯದ ಲಕ್ಷಣವೊ?

ಉಹುಂ – ಎರಡೂ ಅಲ್ಲ. ಹೃದಯದಾಣೆ ಇದು ನಿಜ. ಅವಳು ಸುಖಸಂತೋಷದಿಂದಿದ್ದು ನನ್ನಿದಿರು ಸುಳಿಯುತ್ತಿದ್ದರೆ ಸಾಕು, ಅದೇ ನನಗೆ ಪರಮಸುಖ. ಅವಳು, ಮೋಹನ – ಅಲ್ಲ ಇಬ್ಬರಲ್ಲ – ಮೋಹನನೆಂದರೆ ಅವಳ ಅಂಶ, ಅವಳನ್ನು ಪ್ರೀತಿಸುವಷ್ಟೆ, ಪ್ರೀತಿಸುವಂತೆಯೆ ಮೋಹನನನ್ನೂ

ಪ್ರೀತಿಸುತ್ತೇನೆ. ಒಬ್ಬರೊಬ್ಬರ ಅಂಶ ಅವರು, ಇಬ್ಬರಲ್ಲ. ಕುಮುದ ನನ್ನನ್ನು ಪ್ರೀತಿಸುತ್ತಾಳೆ, ಬಲ್ಲೆ ನಾನು; ನನ್ನ ಸುಖದಲ್ಲಿ ಅವಳು ಸುಖವನ್ನು ಕಾಣುತ್ತಾಳೆ, ಅದನ್ನೂ ಬಲ್ಲೆ; ಅದಕ್ಕಾಗಿಯೆ ಇಂದಿನ ಸಭೆಗೆ ಅವಳು ಬರಬೇಕು ಎಂದು ನಾನು ಬಯಸಿದ್ದು; ನನಗಾಗುವ ಸತ್ಕಾರವನ್ನು ಕಂಡು ಅವಳಿಗೆ ಆನಂದವಾಗುವುದು, ಅವಳ ಆನಂದವನ್ನು ಕಂಡು ನಾನು ಸುಖಿಯಾಗುವೆ, ನಾವಿಬ್ಬರೂ ಆನಂದಮಯ ಕಣ್ಣುಗಳಿಂದ ಒಬ್ಬರೊಬ್ಬರನ್ನು ನೋಡಿದ ಮೇಲೆ, ಇಬ್ಬರ ದೃಷ್ಟಿಗಳೂ ಒಂದೆಡೆ ಸೇರುವುವು ಮೋಹನನಲ್ಲಿ ನೆಟ್ಟು.

"ಮೋಹನನೂ ಬರಲಿ ಸಭೆಗೆ" ಎಂದು ಗಟ್ಟಿಯಾಗಿ ನುಡಿದ ರಾಮಣ್ಣ ತನ್ನ ಕಣ್ಣುಗಳಲ್ಲಿ ಇಣಿಕಿಕ್ಕುತ್ತಿರುವ ನೀರ ಹನಿಗಳನ್ನು ತಪ್ಪಿಸಲು. "ಮೋಹನನೂ ಬರಲಿ ಸಭೆಗೆ" ಎಂದ ಕಿಟಕಿಯ ಹತ್ತಿರ ಹೋಗಿ. "ಮೋಹನನೂ ಬರಲಿ ಸಭೆಗೆ" ಎಂದ ಮೆಟ್ಟಲುಗಳ ಹತ್ತಿರ ಹೋಗಿ.

## ೧೫

ಕೆಲಸದಲ್ಲಿ ತೊಡಗಿದ ಕುಮುದ ತಟ್ಟನೆ ತಡೆದಳು. ಏನೋ ಕೇಳಿಸಿತಲ್ಲ? ಯಾರೋ ಮಾತನಾಡಿದರಲ್ಲ? ಒಮ್ಮೆಲೆ ಗೊಂಬೆಯಂತೆ ನಿಶ್ಚಲಳಾಗಿ ನಿಂತಳು. ಅಲ್ಲ, ಗೊಂಬೆಯಲ್ಲ, ಗೊಂಬೆಗೆ ನಿಲ್ಲಲು ಗಟ್ಟಿಯಾದ ಕಾಲ್ಗಳಿರುವುವು. ತನಗೆ ಕಾಲ್ಗಳೇ ಇಲ್ಲ, ಅಲ್ಲಲ್ಲ – ತನ್ನ ಕಾಲ್ಗಳಲ್ಲಿ ತ್ರಾಣವೇ ಇಲ್ಲ.... ಕೈಗಳನ್ನು ತೊಡೆಗೆ ಹಚ್ಚಿ ಕುಮುದ ನಿಂತಲ್ಲಿಯೆ ಕುಳಿತಳು.

"ಮೋಹನನೂ ಸಭೆಗೆ ಬರಲಿ"

ರಾಮಣ್ಣನ ದನಿ. ಮೆಟ್ಟಲುಗಳಿಂದ ಕೆಳಗೆ ಇಳಿದು ಬಂದಿದೆ ದನಿ. ಆ ದನಿ ಆಕೆಗೆ ಹಗ್ಗವಾಯಿತೇನೊ! ಅದರ ಆಧಾರದಿಂದ ಮೆಲ್ಲನೆ ಎದ್ದಳು. ಕನ್ನಡಿಯ ಎದುರಿಗೆ ನಡೆದು ನಿಂತಳು, ಹಣೆಗೆ ತೂಗುತ್ತಿರುವ ಕೂದಲನ್ನು ಸರಿಪಡಿಸಿಕೊಂಡಳು. ಇದೇನು? ಕೈ ಒದ್ದೆಯಾಗಿದೆ! ಹಣೆಗೆ ಬೆವರು!

ಯಾಕೊ–ಯಾಕೊ–ಯಾಕೊ! ಎದೆ ಡಬಡಬನೆ ಬಡಿಯುತ್ತಿದೆ.

ದುಃಖ, ಆನಂದ – ಎರಡರ ಲಕ್ಷಣಗಳೂ ಒಂದೇ. ಹೆದರಿಕೆ, ಬೆವರು, ನಿಶ್ಪ್ರಾಣ....ಆದರೆ ಇದರ ಪರಿಣಾಮವೆಂದರೆ ತನ್ನ ಮೈಯಲ್ಲಿ ಬಲ ಬಂದಂತಾಗಿದೆ. ಅದೇ ಒಂದು ವ್ಯತ್ಯಾಸವೇನೊ ದುಃಖ–ಆನಂದಗಳಲ್ಲಿ? ಈಗ ತನಗೆ ಆನಂದವಾಗಿದೆ. ಮೋಹನ ಸಭೆಗೆ ಬರಬೇಕೆಂದು ತಾನೂ ಬಯಸಿದ್ದಳು, ಈಗ ರಾಮಣ್ಣನೂ ಅದೇ ಮಾತನ್ನೇ ಹೇಳುತ್ತಾನೆ, ತನಗೆ ಆನಂದವಾಗಿದೆ. ಯಾವಾಗಲೂ ಹೀಗೆಯೇ ತನಗೆ. ತನ್ನ ವಿಚಾರ, ರಾಮಣ್ಣನ ವಿಚಾರ ಒಂದಾದಾಗ ರಾಮಣ್ಣನ ಸ್ಪರ್ಶವಾದಂತೆಯೆ ಎನ್ನಿಸುವುದು ತನಗೆ. ಸ್ಪರ್ಶವಾದಾಗೊಮ್ಮೆ ಮೈ ನಡುಗುವುದು, ಬೆವರಿಸುವುದು, ಕಾಲ್ಗಳ ಶಕ್ತಿ ಉಡುಗುವುದು. ಯಾಕೊ–ಯಾಕೊ–ಯಾಕೊ ?

ಸಂತಸದ ಉಬ್ಬಿನಿಂದ ಆ ಪ್ರಶ್ನವನ್ನು ಕೇಳಿಕೊಂಡಳು ತನ್ನನ್ನು ತಾನೇ.

ಎಷ್ಟು ಯುಗಗಳ ಅನುಭವ! ಎಷ್ಟ ವರ್ಷಗಳ ಆನಂದ! ಅಂದಿನ ಅನುಪಮ ಅನುಭವವನ್ನು, ಅಂದಿನ ಅಲೌಕಿಕ ಆನಂದವನ್ನು ಮತ್ತೆ ಮತ್ತೆ ಮೈ ನೆನೆದುಕೊಳ್ಳುವುದೇನೊ ಎಂದೆನ್ನಿಸುವುದು ಆಕೆಗೆ. ಒಮ್ಮೆ ಪ್ರತ್ಯಕ್ಷವಾದ ಆನುಭವ ಇಂದು ಪರೋಕ್ಷವಾಗಿ ಮರುಕಳಿಸುತ್ತಿದೆ. ತಾನು ಹೆಂಗಸಾಗಿ ಹುಟ್ಟಿದ್ದು ಸಾರ್ಥಕ ಎಂದೆನ್ನಿಸಿತ್ತು ಮೊದಲಸಲ ಆ ಅನುಭವ-ವನ್ನು ಪಡೆದಾಗ. ತಾನು, ತನ್ನದು, ತನ್ನವರು ಎಂಬ ಎಲ್ಲದರ ಅರಿವಿದ್ದೂ ಯಾವುದರ ಅರಿವೂ ಇಲ್ಲದಂತಹ, ದುಃಖವೆನ್ನಿಸಿದರೂ ಸುಖವನ್ನುಂಟು ಮಾಡುವಂತಹ, ಕ್ಷಣಿಕವಾದಾಗೂ ಚಿರಂತನವೆನಿಸುವ, ಇನ್ನೊಬ್ಬರ ಸ್ಪರ್ಶವಿದ್ದೂ ಎಲ್ಲ ಒಬ್ಬರೇ ಎನ್ನಿಸುವಂತಹ—

ಕುಮುದಳ ಮೈನಡುಗುವುದು ನೆನಸಿದಾಗೊಮ್ಮೆ, ಈಗ ನಡುಗಿತು. ಕಾಲ್ಗಳು ಸ್ಥಿರವಾಗಿ ನಿಲ್ಲಲೊಲ್ಲವೆಂದು ಮತ್ತೆ ಕುರ್ಚಿಯಲ್ಲಿ ಕುಳಿತು-ಕೊಂಡಳು; ತನ್ನನ್ನೆ ತಾನು ಮರೆತಳೇನೊ ಎಂಬ ಹೆದರಿಕೆಯಿಂದ ಕನ್ನಡಿಯಲ್ಲಿ ತನ್ನ ಪ್ರತಿಬಿಂಬವನ್ನು ನೋಡಿದಳು. ಮೈ ಬಿಸಿಯಾಗಿಲ್ಲ. ಆದರೂ ಉಸಿರು ಬಿಸಿ ಎನ್ನಿಸುವುದಲ್ಲ? ಕಣ್ಣು ಮುಚ್ಚಿ ಕುಳಿತಳು.

ಮನೆ, ಸಭೆ, ಸತ್ಕಾರ ಎಲ್ಲವೂ ಮರೆತುಹೋಯಿತು. ಈಗ ತಾನು ಮತ್ತೊಂದು ಜಗತ್ತಿನಲ್ಲಿಯೆ ವಿಹಾರ ಮಾಡುತ್ತಿದ್ದಾಳೆ.

ಆ ದಿನ – ಯಾವ ದಿನ ?–ಯಾವ ದಿವಸವೇನು ?–ತನ್ನ ಜೀವನದಲ್ಲಿ ಅದೊಂದೇ ದಿನ–ಚಿರಂತನ ಆನಂದವನ್ನು ಒದವಿಸಿಕೊಟ್ಟ ಆ ದಿನ ರಾಮಣ್ಣ ಏನನ್ನೋ ಬರೆಯುತ್ತಿದ್ದ. ಅವನ ಮೇಜಿನ ಎದುರು ಕನ್ನಡಿ ಇದ್ದಿತು. ತಾನು ಕೆಲಹೊತ್ತು ದೂರದಿಂದಲೆ ನೋಡುತ್ತ ನಿಂತಿದ್ದಳು, ಅಗಲವಾದ ಬೆನ್ನು, ಬಲಭುಜ ಬರೆಯುವುದಕ್ಕಾಗ ಸರಿದಾಡುತ್ತಿದೆ, ತಲೆಗೂದಲು ಕೆದರಿದೆ, ಎಡಗೈಯಿಂದ ಆಗಾಗ ಕಿವಿಯನ್ನು ತುರಿಸುತ್ತಿದ್ದಾನೆ; ಮೆಲ್ಲನೆ ನಡೆದು ತಾನು ಕುರ್ಚಿಯ ಹತ್ತಿರ ಹಿಂದೆ ನಿಂತುಕೊಂಡಳು; ಬದಿಗೆ ನಿಲ್ಲಬೇಕೆಂದರೆ ಕುರ್ಚಿಗೆ ಕೈಗಳಿದ್ದಿರಲಿಲ್ಲ; ಎಷ್ಟೊತ್ತು ನಿಂತಿದ್ದಳೊ! ಕನ್ನಡಿಯಲ್ಲಿ ತಾನು ಕಾಣುತ್ತಿದ್ದರೂ ಅವನ ಲಕ್ಷ್ಯವಿದ್ದಿರಲಿಲ್ಲ; ಒಮ್ಮೆ ಮುಖವನ್ನು ಮೇಲೆತ್ತಿ ನೋಡಿದ, ತನ್ನ ಹಣೆಯನ್ನು ಎಡಗೈಯಿಂದ ಸವರಿಕೊಂಡ, ಆಗಲೂ ತನ್ನ ಕಡೆ ಲಕ್ಷ್ಯವಿದ್ದಿರಲಿಲ್ಲ; ಎಂತಹ ಏಕಚಿತ್ತತೆ! ತಲೆಗೂದಲನ್ನು ಮೆಲ್ಲನೆ ನವರುತ್ತ ನಿಂತಳು, ಹೆದರಿದಳು ಅವನ ಧ್ಯಾನ ಭಂಗವಾಗುವುದೇನೊ ಎಂದು. ಉಹುಂ, ಹೊರಜಗತ್ತಿನ ಎಚ್ಚರವೆ ಇದ್ದಂತಿರಲಿಲ್ಲ. ತನಗೂ ತುಸು ಕೆಣಕಿದಂತಾಯಿತು. ಇದೇನು ಏಕಚಿತ್ತತೆಯೊ ಅಲಕ್ಷ್ಯವೊ ? ಈ ಪರಿ ತನ್ನನ್ನು ಅಲಕ್ಷಿಸುವುದೆ ? ಸ್ವಲ್ಪ ಹಟದಿಂದಾದರೂ ಮೆಲ್ಲನೆ ಅವನ ಎಡಬದಿಗೆ ಸರಿದಳು. ಒಂದು ನಿಮಿಷ. ಬಲಗೈ ಬರೆಯುತ್ತಲಿದೆ, ಎಡಗೈ ಮೆಲ್ಲನೆ ಸರಿದು ತನ್ನನ್ನು ಸುತ್ತಿತು. ಧ್ಯಾನ ಭಂಗವಾಯಿತೆ ? ಇಲ್ಲ – ಇಲ್ಲ – ಬರೆಯುವುದು ನಡೆದೇ ಇದೆ! ಎಡಗೈ ತನ್ನನ್ನು ಸುತ್ತಿದೆ. ಎಷ್ಟು ಮಮತೆ ಆ ಕೈಯಲ್ಲಿ! ಎಷ್ಟು ಮಿದುವಾಗಿತ್ತು ಆ ಸ್ಪರ್ಶ! ಸುತ್ತಿದ ಕೈ ತನ್ನನ್ನು ಕೆಳಗೆ ಸೆಳೆದಿದೆ. ತಾನೀಗ ರಾಮಣ್ಣನ ತೊಡೆಯಮೇಲೆ ಕುಳಿತಿದ್ದಾಳೆ. ಆದರೆ ರಾಮಣ್ಣನಿಗೆ ಅದರ ಎಚ್ಚರವಿದ್ದಂತಿಲ್ಲ. ಇಷ್ಟೇಕೆ ? ತನಗೂ ಎಚ್ಚರವಿರಲಿಲ್ಲವೇನೊ ? ಕೆಲವೇ ನಿಮಿಷಗಳಲ್ಲಿ ತಾನು ಕುಳಿತಿದ್ದೆಲ್ಲಿ—ಎಂಬುದರ ಅರಿವು ತನಗಿರಲಿಲ್ಲ. ಕುಳಿತದ್ದು ಎಷ್ಟೊತ್ತು ಎಂಬುದರ ಅರಿವೂ ಇಲ್ಲ; ಒಬ್ಬರೊಬ್ಬರೊಡನೆ ಮಾತು ಇಲ್ಲ; ಕುಳಿತ ಎರಡು ದೇಹಗಳಲ್ಲಿಯ ಎರಡು ಹೃದಯಗಳು

ಒಂದಾದುವೇನೊ ಎನ್ನುವಂತೆ ನಿಶ್ಶಬ್ದರಾಗಿದ್ದಾರೆ ತಾವಿಬ್ಬರು. ಬರೆಯು-ವುದನ್ನು ನೋಡುವುದರಲ್ಲಿ ತಾನು ನಿಮಗ್ನಳಾಗಿದ್ದಾಳೆ; ತನ್ನನ್ನು ಮೈದಡವಿ ಬರೆಯುವುದರಲ್ಲಿ ರಾಮಣ್ಣ ನಿಮಗ್ನನಾಗಿದ್ದಾನೆ. ಭುಜಕ್ಕೆ ಭುಜ, ಗಲ್ಲಕ್ಕೆ ಗಲ್ಲ, ಸೊಂಟಕ್ಕೆ ಕೈ; ಎರಡು ದೇಹಗಳನ್ನು ಸೀಳಿ ಒಳಗಿನ ಎರಡು ಹೃದಯಗಳು ಕೂಡುವುವೊ ಎನ್ನುವ ಹಾಗೆ. ಮಾತಿಲ್ಲದೆ, ಕಣ್ಮುಚ್ಚಿ ತಾನು ಎಷ್ಟೊತ್ತು ಕುಳಿತಿದ್ದಳೊ!

ಆ ನಿಶ್ಶಬ್ದ ತನ್ಮಯತೆಯಿಂದ ತನಗಾದ ಆನಂದವನ್ನು ತಾನೆಂದಿಗೂ ಮರೆಯುವಂತಿಲ್ಲ, ಎಂದುಕೊಂಡಳು ಕುಮುದ.

ಮತ್ತೆ ಕಣ್ಮುಚ್ಚಿದಳು ಆ ಆನಂದವನ್ನು ನೆನೆದು ಸವಿಯುವಂತೆ.

ಕುಮುದ ಈಗ ಉತ್ಸಾಹಗೊಂಡಿದ್ದಾಳೆ. ರಾಮಣ್ಣನಿಗಾಗಿ ಒಳ್ಳೆಯ ಬಟ್ಟೆಗಳನ್ನು ತೆಗೆದಿಟ್ಟದ್ದಾಳೆ, ಮೋಹನನಿಗಾಗಿಯೂ ಎಲ್ಲ ಸಿದ್ಧತೆಯನ್ನು ಮಾಡಿದ್ದಾಳೆ, ತಾನು – ಉಂ – ತನ್ನದು ಸರಿಯಾಗಿದೆಯೆ? ರಾಮಣ್ಣನ ಸತ್ಕಾರದ ಸಭೆಯಲ್ಲಿ ತನಗೆ ಯಾಕೆ ಸಡಗರ-ಸಿಂಗಾರ? ರಾಮಣ್ಣ ಲೇಖಕ. ಆದರೇನು? ತಾನು ಲೇಖಕನ ಅರ್ಧಾಂಗಿ. ಅಂದು ರಾಮಣ್ಣನ ತೊಡೆಯಮೇಲೆ ಕುಳಿತಾಗ ತಾನೇ ಬರೆಯುತ್ತಿದ್ದಳೇನೊ ಎಂದೆನ್ನಿಸಿತ್ತು.

"ನಿಮ್ಮ ಏಕಾಗ್ರತೆಗೆ ಭಂಗ ಬಂದು ಎಲ್ಲಿ ಸಿಟ್ಟಿಗೆ ಬರ್ತೀರೊ ಅಂತ ಮಾಡಿದ್ದೆ" ಎಂದಿದ್ದಳು ಆಮೇಲೆ.

"ಯಾವ ಏಕಾಗ್ರತೆ?"

"ಬರೆಯೋದರಲ್ಲಿ?"

"ಭಲೆ! ಒಳ್ಳೆ ಪ್ರಶ್ನವನ್ನೇ ಕೇಳ್ತೀಯಲ್ಲ, ಕುಮುದ? ಬರೆಯೋವಾಗ ಸ್ಫೂರ್ತೀನೇ ಬಂದು ಬಾಗಿಲ ಬಡಿದರ ಲೇಖಕನಿಗೆ ಏಕಾಗ್ರತಾ-ಭಂಗ ಆಗ್ತದೆಯೆ?"

"ಸ್ಫೂರ್ತಿ ಬರಲಿ ಅಂತ ಹಣೆ ಸವರುತ್ತಿದ್ದರೇನೊ?"

"ಇಲ್ಲ – ಬಂದ ಸ್ಫೂರ್ತಿಯನ್ನ ದಕ್ಕಿಸಿಕೊಳೋ ತ್ರಾಣ ಬರಲಿ ಅಂತ ತಲೆಯನ್ನ ತಿಕ್ಕಿಕೊಳ್ಳುತ್ತಿದ್ದ."

"ಅದೆಂತಾ ಸ್ಫೂರ್ತೀನೊ! ನಾವಿಬ್ಬರೇ ಇದ್ದಾಗ ಇನ್ನೊವ್ಮೆ ಬಂದಿತು ಅಂದರ—"

"ಬರೋದು ಇಷ್ಟೇ ಅಲ್ಲ, ಬಂದು ತೊಡೆಯ ಮ್ಯಾಲೇ ಕುಕ್ಕರಿ-ಸೋದು" ಎಂದು ಗಟ್ಟಿಯಾಗಿ ನಕ್ಕಿದ್ದ.

ತಾನೇ ಸ್ಫೂರ್ತಿ! ತನ್ನಿಂದ ತೊಂದರೆ ಇಲ್ಲ, ವಿರುದ್ಧವಾಗಿ ಬರೆಯಲು ಉತ್ಸಾಹ! ಎಂತಹ ಹೆಮ್ಮೆ ಎನ್ನಿಸಿತ್ತು ತನಗೆ! ರಾಮಣ್ಣನ ಲೇಖನಕ್ಕೆ ತಾನು ಅಗತ್ಯ! ಹಾಗೆಂದರೆ ತಾನು ಹೆಚ್ಚು ದಕ್ಷಳಾಗಿರಬೇಕು, ತಾಯಿ ಮಗುವನ್ನು ಪಾಲಿಸಿ–ಪೋಷಿಸುವಂತೆ ತಾನು ರಾಮಣ್ಣನ ಲೇಖನವನ್ನು ಪೋಷಿಸಬೇಕು. ಈ ವಿಚಾರಕ್ಕಾಗಿ ರಾತ್ರಿ ನಿದ್ರೆ ಬಂದಿರಲಿಲ್ಲ. ಎದ್ದು ಸುಖ ವಾಗಿ ಮಲಗಿದ ರಾಮಣ್ಣನನ್ನು ನೋಡಿದ್ದಳು. ನಿಜವಾಗಿ ಕೂಸು! ಆಟವ ನ್ನಾಡಿ ದಣಿದಿದೆ. ಎಂತಹ ಹರವಾದ ಹಣೆ! ತಟ್ಟನೆ ಅದನ್ನು ಮುದ್ದಿಸಿದ್ದಳು. ರಾಮಣ್ಣ ಕಣ್ತೆರೆದ. ಅಯ್ಯೋ—ಮೋಸ! ಮಲಗಿರಲೇ ಇಲ್ಲ! ಮುದ್ದಿಸ ಹೋದ ತನ್ನ ಮುಖವನ್ನು ಮೇಲೆತ್ತಲೇ ಇಲ್ಲ! ತಾನು ಸ್ಫೂರ್ತಿ, ತಾನು ರಾಮಣ್ಣನ ಸರಸ್ವತಿ, ಕಾಲಿದಾಸನ ಮುಖದಲ್ಲಿ ಮುಖವನ್ನು ಇಟ್ಟು ವಿದ್ಯಾವರವನ್ನು ಕೊಟ್ಟಿದ್ದಳಲ್ಲವೆ ಸರಸ್ವತಿ! ತಾನು ಸ್ಫೂರ್ತಿ, ಲೇಖಕನಾದ ರಾಮಣ್ಣನಿಂದ ತಾನು ಬೇರೆ ವ್ಯಕ್ತಿಯಲ್ಲ; ಲೇಖಕ ಅವನ ಸ್ಫೂರ್ತಿ ಎರಡೂ ಒಂದೇ; ಒಂದನ್ನೊಂದು ವಿಂಗಡಿಸಲು ಬರುವುದಿಲ್ಲ; ಅವೆರಡರ ತಾದಾತ್ಮ್ಯದಿಂದಲೇ ಹುಟ್ಟಿ ಬರುವುದು ಕಲಾಕೃತಿ.

ಮೋಹನ ಕಲಾಕೃತಿ ರೂಪುಗೊಂಡುದು ಆ ದಿನವೆ. ಅದನ್ನು ತಾನು ಹೇಗೆ ಮರೆಯುವಳು? ರಾಮಣ್ಣ ಮೋಹನನನ್ನು ಕೂಗಿದಾಗೊಮ್ಮೆ ರಾಮಣ್ಣನ ಬಾಯಿಯಿಂದ "ಮೋಹನ" ಎಂಬ ಹೆಸರು ಬಂದಾಗೊಮ್ಮೆ ಅಂದಿನ ಅನುಭವದ ಚಿತ್ರ ಕಣ್ಮುಂದೆ ನಿಲ್ಲುವುದು.

ಮೆಲ್ಲನೆ ಎದ್ದಳು ಕುಮುದ; ತಾನಿನ್ನೂ ರಾಮಣ್ಣನ ತೊಡೆಯ ಮೇಲೆಯೆ ಕುಳಿತಿರುವೆನೆಂಬ ಭ್ರಾಂತಿ–ಅವಳಿಗೆ. ಕುರ್ಚಿಯ ಮೇಲಿದ್ದ ಮೆತ್ತನ್ನ ಪೀಠಪನ್ನೆತ್ತಿ, ತನ್ನ ತೊಡೆಯಮೇಲಿಟ್ಟುಕೊಂಡು ಮತ್ತೆ ಕುಳಿತಳು.

ನಾನೆಂತಹ ಸುಖಿ! ನಾನಂತಹ ದುರ್ದೈವಿ—ಎಂದುಕೊಂಡಳು.

ದುರ್ದೈವಿ ಅಲ್ಲದೆ ಮತ್ತೇನು? ಎಷ್ಟು ಏಕಾಗ್ರಚಿತ್ರದಿಂದ ಬರೆಯು ತ್ತಿದ್ದನೋ ಅಷ್ಟೇ ಏಕಾಗ್ರಚಿತ್ತದಿಂದ ತನ್ನನ್ನು ಪ್ರೀತಿಸುತ್ತಿರಬಹುದಲ್ಲ?

'ಬಹುದು'—ಯಾಕೆ ? ಆ ಬಗ್ಗೆ ಸಂಶಯವೇ ಇರಕೂಡದು. ಅವನು ಬರೆದ ಪುಸ್ತಕಗಳೊಳಗಿನ ಸ್ತ್ರೀಪಾತ್ರಗಳ ಹೊರತಾಗಿ ಅವನಿಗೆ ಬೇರೆ ಸ್ತ್ರೀಯರಿಗಾಗಿ ವಿಚಾರವೆ ಇದ್ದಿರಲಿಲ್ಲ. ಆದರೂ ತಾನು ದುರ್ದೈವಿ !

ಛಿ ! ಇದೆಂತಹ ವಿಚಾರ ! ಮನಸ್ಸಿನಲ್ಲಿ ಏನೋ ಒಂದು ತರದ ಉತ್ಸಾಹವಿರುವಾಗ, ಏನೋ ಒಂದು ಅನಿರೀಕ್ಷಿತ ಘಟನೆಯಾಗಬಹುದೆಂದೆನಿಸುವಾಗ ಹಿಂದಿನ ತಪ್ಪುಗಳ ಎಂಜಲಿನಲ್ಲಿಯೆ ಕೈಗಳನ್ನು ಮುಸುರಿ ಮಾಡಿಕೊಳ್ಳುವುದೇಕೆ ? ರಾಮಣ್ಣನ ಪ್ರೀತಿಯನ್ನು ಇಂದು ಮೊದಲ ಬಾರಿ ಕಂಡುಹಿಡಿದಂತಾಗಿದೆ. ಇಂದು ಮತ್ತೆ ತಾನು ಮದುವೆಯ ಮದುವಣಗಿತ್ತಿ ಎನ್ನಿಸುತ್ತಿದೆ ! ರಾಮಣ್ಣನ ದನಿ ಕೇಳಿ ಉತ್ಸಾಹ, ನಾಚಿಕೆ, ರೋಮಾಂಚ. ತಾನು ಮದುವಣಗಿತ್ತಿ. ಉಹುಂ....ಈ ವೇಷ ಸರಿಯಲ್ಲ, ಸಂದರ್ಭಕ್ಕೆ ತಕ್ಕಂತೆ ವೇಷ ಮಾಡಿಕೊಳ್ಳಬೇಕು. ತಾನು ಸಿಂಗರಿಸಿಕೊಂಡು ಸಭೆಗೆ ಹೋದರೆ ರಾಮಣ್ಣನಿಗೆ ಆನಂದ, ರಾಮಣ್ಣನಿಗೆ ಆನಂದವಾದರೆ ತನಗೆ ಆನಂದ, ಇಬ್ಬರೂ ಆನಂದಭರಿತರಾಗಿ ಕಣ್ತುಂಬಿ ಮಗನನ್ನು ನೋಡಬೇಕು, ನಮ್ಮಿಬ್ಬರ ದೃಷ್ಟಿಗಳು ಮೋಹನನಲ್ಲಿ ಸೇರಿಕೊಂಡು ಒಂದನ್ನೊಂದು ಚುಂಬಿಸಬೇಕು—

ಕುಮುದ ತಟ್ಟನೆ ತಡೆದಳು. ವಿಚಾರಭರದಲ್ಲಿ ತನಗಾಗಿ ಹೊಸತಾದ ಬೇರೊಂದು ಸೀರೆಯನ್ನು ತೆಗೆದು ಕೈಯಲ್ಲಿ ಹಿಡಿದುಕೊಂಡು ನಿಂತಿದ್ದಾಳೆ. ಒಮ್ಮೆಲೆ ಗಾಬರಿಯಾದವಳಂತೆ ಮೆಟ್ಟಲುಗಳ ಕಡೆ ನೋಡಿದಳು. ಈ ಸೀರೆಯನ್ನು ತೊಡುವಾಗಲೇ ಅಲ್ಲವೇ ರಾಮಣ್ಣ ತನ್ನನ್ನು ಪೀಡಿಸಿದ್ದು. ಅಂದು ಕೊನೆಗೆ ತಾನು ಸಿಟ್ಟಾಗಿ, "ಇಂಥಾ ಸ್ವಭಾವ ಇಟ್ಕೊಂಡು ನೀವು ಪುಸ್ತಕಾ ಬರೆದರೆ ಸಂಭಾವಿತರು ಅವನ್ನ ಓದಲಿಕ್ಕಿಲ್ಲ, ಕೈಯಿಂದ ಮುಟ್ಟಲಿಕ್ಕಿಲ್ಲ" ಎಂದಿದ್ದಳು ; ಅಳುವಷ್ಟು ಸಿಟ್ಟು ಬಂದಿತ್ತು ತನಗೆ, ರಾಮಣ್ಣ ಗಟ್ಟಿಯಾಗಿ ಹಿಡಿದೆಳೆದವನು ತನ್ನನ್ನು ಮಾತ್ರ ಬಿಟ್ಟಿರಲಿಲ್ಲ ! ಅವನು ತನ್ನನ್ನೆಳೆದದ್ದಕ್ಕೆ ಸೀರೆಯೂ ತನ್ನ ಕೈಗೆ ನಿಲುಕುವಂತಿರಲಿಲ್ಲ.

ಕುಮುದ ಮುಗುಳ್ನಗೆ ನಗುತ್ತಲೆ ಉಸುರ್ಗರೆದಳು. ಮೋಹನ ಇನ್ನೂ ಬಂದಿರಲಿಲ್ಲ ಆಗ, ಅದೊಂದು ಸುದೈವ ಆಗಿತ್ತು ಅನ್ನಬಹುದು, ಎಂದುಕೊಂಡಳು. ಮೋಹನ ಬಂದ ಮೇಲೂ ಅಷ್ಟೆ. ರಾಮಣ್ಣನ ಹುಡು

ಗಾಟಕೆಯ ಸ್ವಭಾವ ಕಳೆದಿರಲಿಲ್ಲ. ಆ ಇನ್ನೊಂದು ದಿನ, ತಾನು ಸೋದ ರತ್ತೆಯ ಮನೆಗೆ ಮೊದಲಸಲ ಹೋಗಿಬಂದ ದಿನ, ಮೋಹನನನ್ನು ಎತ್ತಿ ಕೊಳ್ಳೋ ನೆಪದಿಂದ ಮಂಗತನಕ್ಕೆ ಕೈಹಾಕಿದ್ದರಲ್ಲ? ಆದರೆ–ತಾನು ಬುದ್ಧಿಗೇಡಿ, ತಾನು ದುರ್ದೈವಿ!

ಅಯ್ಯ! ಯಾಕೆ ಮತ್ತೆ ದುರ್ದೈವದ ವಿಚಾರ ತರತೀನಿ? ಈ ಹೊತ್ತು ಮೋಹನ ಬಂದಕೂಡಲೆ ಇಬ್ಬರೂ ಒಂದೊಂದು ಕೈಹಿಡಿದು ಮೋಹನನನ್ನ ಸಭಾಕ್ಕ ಕರೆದುಕೊಂಡು ಹೋದರೆ? ಬ್ಯಾಡ, ಮೋಹನನ ಬದಲು ಇವರು ನನ್ನ ಕೈಯನ್ನೆ ಹಿಡಿದರೂ ಹಿಡಿಯಬಹುದು. ಇಲ್ಲಾ, ಮೋಹನನಿಗೇ ಹೇಳ್ತೀನಿ. ಆ ಹುಡುಗ ಒಂದಿಷ್ಟು ಲಗೂ ಬಂದರ ನೆಟ್ಟ ಗಾಗ್ತದ—

ಕನ್ನಡಿಯನ್ನು ನೋಡಿಕೊಂಡಳು, ಸೀರೆ ತನಗೆ ಒಪ್ಪುವುದಲ್ಲವೆ? ಮೋಹನ ಲಗೂ ಬಂದರೆ ನೆಟ್ಟಗಾಗತದ, ಮೋಹನನೂ ಸಭಾಕ್ಕ ಬರಲಿ ಅಂದಾರ—ಅಯ್ಯಯ್ಯ! "ಮೋಹನ ಸಭಾಕ್ಕ ಬರಲಿ" ಅಂದರಲ್ಲ ಇದೇ ಈಗ. ಅದನ್ನ ನನಗೇ ಹೇಳಿದರು ಕಾಣ್ತದ. ನಾನು ಹುಚ್ಚೀಹಾಂಗ ನನ್ನಷ್ಟಕ್ಕೇ ವಿಚಾರಮಾಡ್ತಾ ಕೂತೀನಿ. ನಾನು ಮಾತೇ ಆಡಲಿಲ್ಲ ಅಂತ ಏನಾದ್ರೂ ತಿಳಕೊಂಡಾರು.

ಕೆಳಮೆಟ್ಟಲಿನವರೆಗೆ ನಡೆದಳು. ಎಷ್ಟೊತ್ತಾಯ್ತು, ಅವನ ಹಾದಿ ನೋಡ್ತಾ ಇದ್ದೀನಿ, ಈ ಹುಡುಗನ ಸುಳಿವೇ ಇಲ್ಲ.

"ಮೋಹನನ ಹಾದೀನೇ ನೋಡ್ತಾ ಇದ್ದೀನಿ" ಎಂದಳು ಗಟ್ಟಿಯಾಗಿ. ಆಮೇಲೆ ತಪ್ಪುಮಾಡಿದ ಹುಡುಗನಂತೆ ನಾಲಗೆಯನ್ನು ಕಚ್ಚಿಕೊಂಡು ಕುಮುದ ಮೆಟ್ಟಲಿನಿಂದ ದೂರಜಾರಿದಳು.

## ೧೬

"ಮೋಹನನೂ ಸಭೆಗೆ ಬರಲಿ" ಎನ್ನುತ್ತ ಮೋಲ್ಮೆಟ್ಟಿನ ಹತ್ತಿರ ನಿಂತಿದ್ದ ರಾಮಣ್ಣ ಕಕ್ಕಾವಿಕ್ಕಿಯಾದವನಂತೆ ಸುತ್ತಲೂ ನೋಡಿದ.

"ಮೋಹನನ ಹಾದೀನೇ ನೋಡ್ತಾ ಇದ್ದೀನಿ."

ಕುಮುದಳ ದನಿ ! ಆ ದನಿಯನ್ನೇ ಕಣ್ಣಾರೆ ಕಾಣಬೇಕೆಂಬುವವನಂತೆ ಕಣ್ಣರಳಿಸಿ ನೋಡಬೇಕೆಂದರೆ ಕಣ್ಗಳನ್ನು ಅರಳಿಸಿದಂತೆ ಕತ್ತಲೆ ಪಸರಿಸಿದಂತಾಯಿತು. ಮೆಟ್ಟಿಲುಗಳ ಮಗ್ಗುಲಿಗಿದ್ದ ಬದಿಗಂಬವನ್ನು ಹಿಡಿದ ಸ್ಥಿರವಾಗಿ ನಿಲ್ಲಬೇಕೆಂದು. ಒಂದುಕ್ಷಣ ಮಾತ್ರ. ಆಮೇಲೆ ವರ್ಷಾನುವರ್ಷಗಳಿಂದ ಮುತ್ತಿಕೊಂಡ ಕಾಡಿಗೆಯ ಗೂಡಿನಂತೆ ದಟ್ಟಾದ ಕತ್ತಲೆ ಒಮ್ಮೆಲೆ ಜಾರಿದಂತಾಯಿತು ; ದೃಷ್ಟಿ ಶುಭ್ರವಾಯಿತು. ಕಾಲ-ದೇಶಗಳ ಮರ್ಯಾದೆಯನ್ನು ಮೀರಿ ನೋಡುವಷ್ಟು ತೀಕ್ಷ್ಣವಾಯಿತು. ಮೈ ಜುಮ್ಮೆಂದಿತು.

ವಿಲಕ್ಷಣ ಸೃಷ್ಟಿ ಮನುಷ್ಯನ ಅಂತರಂಗವೆಂದರೆ ! -ಎಂದುಕೊಳ್ಳುತ್ತ ಕೋಣೆಯೊಳಕ್ಕೆ ಮೆಲ್ಲನೆ ಹೆಜ್ಜೆಗಳನ್ನಿಡುತ್ತ ಆಡ್ಡಾಡತೊಡಗಿದ. ಮನುಷ್ಯನ ಜ್ಞಾನವೂ ವಿಲಕ್ಷಣವಾದುದೆ-ಎನ್ನಬಹುದು. ಯಾವುದೂ ತನ್ನ ಮಟ್ಟಿಗೆ ತಾನು ಅರ್ಥವನ್ನು ಹೊಂದುವುದಿಲ್ಲ. ಮನುಷ್ಯನಿಗೆ ಅತ್ಯಂತ ಇಷ್ಟವಾಗಿದ್ದ ಸುಖ ಎಂದರೇನು ? ಇಂತಹದೆ ಎಂದು ಹೇಳಲು ಶಕ್ಯವಿದೆಯೆ ? ಎಂದೊ ಒಮ್ಮೆ ಮುಂಚಿತ ದುಃಖ ಎಂದು ತಿಳಿದುಕೊಂಡುದರ ವಿರುದ್ಧ ಹೋಲಿಕೆಯಲ್ಲಿ ಸುಖ ಎಂಬುದಕ್ಕೆ ಅರ್ಥ. ಹುಂ. ನಮ್ಮ ಪ್ರತಿಯೊಂದು ಜ್ಞಾನವೂ ಹೀಗೆಯೆ. ಅದಕಾಗಿಯೆ ಮನುಷ್ಯನಲ್ಲಿ ಸ್ಮೃತಿ-ಎಂಬುದು ಒಂದು ವಿಶಿಷ್ಟ ಶಕ್ತಿಯಾಗಿದೆ. ಒಂದು ಇಂದಿನದು—ಅದ್ಯತನ ; ಒಂದು ಹಿಂದಿನದು—ಅತೀತ ; ಹಿಂದಿನದರ ಹೋಲಿಕೆಯಲ್ಲಿ ಇಂದಿನದರ ಅನುಭವವನ್ನು ಜ್ಞಾನ ಎಂದು ತಿಳಿದುಕೊಳ್ಳುತ್ತೇವೆ ! ಕುಮುದಳ ದನಿ ಕೇಳಿ ತನ್ನ ಮೈ ಜುಮ್ಮೆಂದಿತು—ಆನಂದವಾಯಿತು ; ಅದೇ ದನಿಯನ್ನು ಈ ಮುಂಚಿತ ಕೇಳಿದಾಗ—ಉದ್ವಿಗ್ನನಾಗುತ್ತಿದ್ದೆ ; ಇದಲ್ಲವೆ ಜ್ಞಾನಾನುಭವದ ವಿಲಕ್ಷಣತೆ? ಆ ದನಿ ಕೇಳಿದಾಗೊಮ್ಮೆ ಹಿಂದಿನ ಸುಖದ ದಿನಗಳನ್ನು ನೆನೆಯುತ್ತಿದ್ದೆ ; ಅವುಗಳೊಡನೆ ತೂಗಿಸಿ ನೋಡಿ ಉದ್ವಿಗ್ನನಾಗುತ್ತಿದ್ದೆ. ಆದರೆ ಈಗ ? ಇಂದು ? ಅದೇ ದನಿಯನ್ನು ಕೇಳಿ ಹಿಂದಿನ ಉದ್ವಿಗ್ನತೆಯನ್ನು ನೆನೆದುಕೊಂಡೆ, ಇಂದಿನ ಅನುಭವವನ್ನು ತೂಗಿಸಿದ, ಆನಂದಿತನಾದೆ. ಅಹುದೆ ?

ರಾಮಣ್ಣನಿಗೆ ದಿಗಿಲು. ಕುಮುದಳ ದನಿ ಕೇಳಿದೊಡನೆ ತನ್ನ ಮೈ

ಜುಮ್ಮೆಂದಿತೇನೊ ನಿಜ. ಆದರೆ ಅದು ಆನಂದವೆ ? ಕಣ್ಣಿಗೆ ಕತ್ತಲೆ ಗಟ್ಟಿದಂತಾಯಿತಲ್ಲ ಒಂದು ಕ್ಷಣ ? ಅದು ಆನಂದದ ಲಕ್ಷಣವೆ ?

ರಾಮಣ್ಣ ದೀರ್ಘವಾಗಿ ಉಸಿರೆಳೆದು ಕುರ್ಚಿಯಲ್ಲಿ ಬಂದು ಕುಳಿತು ಕೊಂಡ. ಈ ಅಂತರಂಗದ ನೆಲೆಯನ್ನರಿಯುವುದು ಕಠಿಣ–ಎಂದುಕೊಂಡ. ಸಾಕ್ಷಾತ್ ಪರಮಾತ್ಮನಿಗೂ ಅರಿಯದ ರಹಸ್ಯ ಮಾನವಮಾತ್ರರಾದ ನಮಗೆ ವಿಶದವಾಗುವುದು ಹೇಗೆ—ಎಂದು ನಗೆಮೊಗದಿಂದ ಹೇಳಿಕೊಂಡ. ಪಾಪ ! ಪರಮಾತ್ಮನ ಅವತಾರನಾದ ಸಾಕ್ಷಾತ್ ಶ್ರೀರಾಮಚಂದ್ರನ ಅವಸ್ಥೆ ಏನಾಯಿತು ಭವಭೂತಿಯ ಉತ್ತರ ರಾಮಚರಿತ ನಾಟಕದಲ್ಲಿ ? "ನಿನ್ನ ಬಾಹು ನನ್ನ ಕಂಠದ ಆಶ್ರಯವನ್ನು ಪಡೆಯಲಿ" ಎನ್ನುತ್ತಾನೆ ರಾಮಚಂದ್ರ ಸೀತಾ ದೇವಿಗೆ. ದೇವಿ ನಾಚಿಗೆಯಿಂದ ಸುಮ್ಮನಿರುತ್ತಾಳೆ. ಆಗ ತಾನೇ ತನ್ನ ಕೈಗಳಿಂದ ಹಾಗೆ ಮಾಡುತ್ತಾನೆ ರಾಮಚಂದ್ರ. ತತ್‌ಕ್ಷಣ ಬೆರಗಾದವನಂತೆ, "ಪ್ರಿಯೇ ಕಿಮೇತತ್—ಇದೇನು ? " ಎಂದು ದಿಙ್ಮೂಢನಂತೆ ಕೇಳು ತ್ತಾನೆ. ಆಕೆಯ ಬಾಹುಸ್ಪರ್ಶದಿಂದ ತನಗಾದುದು ಏನು ? ಏನೂ ತಿಳಿಯದು—ಎಂದು ಬಾಯ್ತುಂಬ ಹೇಳುತ್ತಾನೆ :

ವಿನಿಶ್ಚೇತುಂ ಶಕ್ಯೋ ನ ಸುಖಮಿತಿ–ವಾ ದುಃಖಮಿತಿ–ವಾ
ಪ್ರಮೋಹೋ ನಿದ್ರಾ ವಾ ಕಿಮು ವಿಷವಿಸರ್ಪಃ ಕಿಮು ಮದಃ।
ತವ ಸ್ಪರ್ಶೇ ಸ್ಪರ್ಶೇ ಮಮಹಿ ಪರಿಮೂಢೇಂದ್ರಿಯಗಣೋ
ವಿಕಾರಶ್ಚೈತನ್ಯಂ ಭ್ರಮಯತಿ–ಚ ಸಂಮೀಲಯತಿ–ಚ॥

ಎಂತಹ ವಿಚಾರ ! ಅದರ ಅರ್ಥವೇನು ? ಯಾವನೊ ಬುದ್ಧಿಗೇಡಿ ಟೀಕಾಕಾರ ಅದಕ್ಕೆ ಅರ್ಥವನ್ನು ಕೊಡುತ್ತಾನೆ ಹೀಗೆ: 'ಸರ್ವಮಿದಂ ಸೀತಾಯಾ ಭೋಗ್ಯತಾಪ್ರಕರ್ಷೇ ತಾತ್ಪರ್ಯಮಾವಿಷ್ಕರೋತಿ.' ಎಂದು ! ಎಂತಹ ಅನಾಗರಿಕ ತಾತ್ಪರ್ಯವನ್ನು ಕಂಡು ಹಿಡಿದಿದ್ದಾನೆ ಟೀಕಾಕಾರ ! ಹೆಣ್ಣಿನ ಸ್ಪರ್ಶ ಮೈಮರೆಯಿಸುವುದೆಂದರೆ ಆ ಹೆಣ್ಣು ಅತಿಶಯವಾಗಿ ಭೋಗ್ಯವಂತೆ ! ಯಾವನೋ ಆಹಾರ–ನಿದ್ರಾ–ಭಯ–ಮೈಥುನಗಳ ಜೀವನ ದಲ್ಲಿ ಕೊಬ್ಬಿದ ಮಾನವಪಶು ಹಾಗೆ ತಿಳಿದುಕೊಳ್ಳಲಿ. ಆದರೆ ಭವಭೂತಿ ಹೇಳುವುದು ಅದಲ್ಲ. ಸ್ಪರ್ಶದಿಂದ ಅದ್ವೈತಾನಂದವಾಗುವುದು ಎಂದು

ಹೇಳುತ್ತಾನೆ. ಸುಖ-ದುಃಖ, ಪ್ರಮೋಹ-ನಿದ್ರಾ, ವಿಷ-ಮದ-ಈ ಯಾವ ಪ್ರಕಾರವನ್ನೂ ವಿಂಗಡಿಸಲಾರದಂತಹ ವಿಕಾರ ಹುಟ್ಟಿತು ಆ ಸ್ಪರ್ಶದಿಂದ.

ಭವಭೂತಿಯ ಮಾತು ನಿಜ. ಒಂದು ಕ್ಷಣ ಕಣ್ಣಿಗೆ ಕತ್ತಲೆಗಟ್ಟಿದಂತಾದಾಗ ತಾನು ಅನುಭವಿಸಿದ್ದು ಅಂತಹ ಅದ್ವೈತ ಆನಂದ. ಅಂತಹ ಅದ್ವೈತ ಆನಂದದಲ್ಲಿ ಭೋಗೀ ಯಾರು, ಭೋಗ್ಯ ಯಾವುದು ?

ತನ್ನ ಮೈ ಬಲಗೊಂಡಿತೇನೊ ಎಂದೆನ್ನಿಸಿತು ರಾಮಣ್ಣನಿಗೆ. ಕುಮುದಳ ದನಿ, ಕುಮುದಳ ಸ್ಪರ್ಶ, ಕುಮುದಳ ನೆನಪು-ಇದರಿಂದ ಯಾವಾಗಲೂ ತನ್ನಲ್ಲಿ ವಿದ್ಯುತ್ಸಂಚಾರವಾದಂತಾಗಿ ಮೈಯಲ್ಲಿ ಕಸುವು ಹೆಚ್ಚಿದಂತಾಗುವುದು. ನಿಜವಾಗಿಯೂ ತಾನು ಭಾಗ್ಯವಂತ ; ಇಂತಹ ಪ್ರೇಮದ ಜೀವನವನ್ನು ಅನುಭವಿಸಿದ ತಾನು—

ರಾಮಣ್ಣ ತನ್ನ ವಿಚಾರಪ್ರವಾಹವನ್ನು ತಡೆದ. ಹುಂ. ಒಳ್ಳೆಯಭಾಗ್ಯ—ಎಂದುಕೊಂಡ. ಹತ್ತುವರ್ಷಗಳಿಂದ ಭೋಗಿಸಿದ ಯಾತನೆಯನ್ನು ನೆನೆದರೆ—

ಅಲ್ಲ-ಅದು ಯಾತನೆ ಅಲ್ಲವೇನೊ ? ರಾಮಣ್ಣನಿಗೆ ಒಂದು ವಿಚಾರ ಬಂದಿತು. ಮನುಷ್ಯ ಸುಖಿಯಾಗಬೇಕಾದರೆ ಅವನ ಕಷ್ಟಗಳು ಮಾಯವಾಗಬೇಕು ಎಂದು ಹಟ ಹಿಡಿದರೆ ಮನುಷ್ಯನು ಎಂದಿಗೂ ಸುಖಿಯಾಗಲಾರ ಎಂದೆನ್ನಿಸಿತು ಅವನಿಗೆ. ಬಾಡಿಗೆಯ ಮನೆ ಸೋರಿದರೆ ಯಾರ ಹೊಣೆ ? ಅದನ್ನು ತಪ್ಪಿಸುವುದು ಬಾಡಿಗೆದಾರನ ಕೈಯಲ್ಲಿದೆಯೆ ? ಜೀವನದಲ್ಲಿ ನಮ್ಮನ್ನು ಮೀರಿದ ಅನೇಕ ಶಕ್ತಿಗಳಿವೆ, ಅನೇಕ ಸಂದರ್ಭಗಳಿವೆ ; ಅವುಗಳಿಂದ ಒದವಿಸಬಹುದಾದ ಕಷ್ಟಗಳ ಇದಿರಿನಲ್ಲಿ ನಾವು ಎಷ್ಟು ನರಳಿದರೇನು? ಎಲ್ಲ ಶಕ್ತಿಗಳನ್ನು ಗೆದ್ದರೂ ಸಾವನ್ನು ಗೆಲ್ಲಲಾರ ಮಾನವ, ಒಂದು ವೇಳೆ ಸಾವನ್ನು ಗೆದ್ದರೆ ಜೀವನಕ್ಕೆ ಹೇಸಬಹುದು ಮಾನವ. ಕಷ್ಟಗಳು ಮಾಯವಾಗಲಿ ಎಂದು ಬಯಸುವುದು ತಪ್ಪು, ಅಜ್ಞಾನ. ಕಷ್ಟಗಳನ್ನು ಅನುಭವ ಎಂದು ತಿಳಿದರೆ, ಅದೊಂದು ಅಗತ್ಯವಾದ ಶಿಕ್ಷಣಕ್ರಮ ಎಂದು ತಿಳಿದರೆ—ತಿಳಿದರೆ—ಕಷ್ಟದ ಕಷ್ಟತ್ವ ಮಾಯವಾಯಿತೆನ್ನಬಹುದು. ರಾಮಣ್ಣನಿಗೆ ನಗೆ ತಡೆಯದಾಯಿತು. "ಕಷ್ಟದ ಕಷ್ಟತ್ವ." ಆ ವಿಚಾರವನ್ನು ಬೇರೆ ಹೇಗೆ ಹೇಳಬೇಕೊ ?.... ಹೋಗಲಿ, ನನ್ನ ಮನಸ್ಸಿನಲ್ಲಿದ್ದುದು ನನಗಾದರೂ

ತಿಳಿದಿದೆಯಲ್ಲ—ಎಂದು ಸಮಾಧಾನವನ್ನು ತಂದುಕೊಂಡ.....ಸಮಾಧಾನ ತಂದುಕೊಳ್ಳುವುದು ಬಲು ಸುಲಭ ಎಂದ ಮತ್ತೊಂದು ವಿಚಾರ ಹೊಳೆ ದದ್ದಕ್ಕೆ. ದುಷ್ಯಂತ–ಶಕುಂತಲೆ, ಯಕ್ಷ–ಯಕ್ಷನ ಹೆಂಡತಿ, ರಾಮು–ಸೀತಾ ಇಂತಹರ ಪರಸ್ಪರ ಪ್ರೇಮವನ್ನು ಅವರ ವಿರಹದಿಂದಲೆ ತೋರಿಸಿಕೊಟ್ಟಿ ದ್ದಾರೆ ಕವಿಗಳು.

ಯಕ್ಷ ತನ್ನ ಹೆಂಡತಿಯನ್ನು ಪ್ರೀತಿಸುತ್ತಿದ್ದ, ಒಂದು ವರ್ಷದ ವಿರಹ ವನ್ನು ಭೋಗಿಸಿದ.

ದುಷ್ಯಂತ ಶಕುಂತಲೆಯನ್ನು ಪ್ರೀತಿಸುತ್ತಿದ್ದ, 8–10 ವರ್ಷಗಳ ವರೆಗೆ ಆಕೆಯಿಂದ ದೂರವಾಗಿದ್ದ.

ರಾಮು–ಸೀತೆಯರ ಪ್ರೇಮ ಅನುಪಮ, ಮಕ್ಕಳಾಗುವ ಸಂದರ್ಭದಿಂದ ಕೊನೆಯುವರೆಗೂ ವಿಯೋಗದಲ್ಲಿದ್ದರು.

ತಾನು ಹತ್ತುವರ್ಷ ಕುಮುದಳಿಂದ ದೂರವಾಗಿದ್ದಾನೆ.

ಆದ್ದರಿಂದ ತಾನೂ ಕುಮುದಳನ್ನು ಪ್ರೀತಿಸುತ್ತಾನೆ !

ಭಲೆ ! ಸಿದ್ಧಾಂತ ಸರಿಯಾಗಿದೆಯಲ್ಲವೆ ?

ಸಿದ್ಧಾಂತ ಸರಿಯಾಗಿದೆ, ತರ್ಕಬದ್ಧವಾಗಿದೆ ; ಕುಮುದಳು ಒಪ್ಪುವು ದೊಂದೇ ಬಾಕಿ !

ಇಲ್ಲ–ಆ ಬಾಕಿ ತೀರಿತು–ಕುಮುದಳು ಒಪ್ಪಿದಂತೆಯೆ–"ಮೋಹನನೂ ಸಭೆಗೆ ಬರಲಿ" ಎಂದು ನಾನು ಹೇಳಿದ ಕೂಡಲೆ "ಮೋಹನನ ಹಾದೀನೇ ನೋಡ್ತೀನಿ" ಎಂದಳಲ್ಲ ?

ಥೆ ! ಎಂತಹ ಹುಚ್ಚು! ಒಂದು ಸಾಮಾನ್ಯ ಮಾತಿಗೆ ತಾನು ಎಷ್ಟೊಂದು ಅರ್ಥವನ್ನು ಕಲ್ಪಿಸುತ್ತಿದ್ದಾನೆ ! ಎಂದರೆ ? ಅರ್ಥ ಶಬ್ದಗಳಿ .ಗಿದೆಯೊ ? ತನ್ನ ಕಲ್ಪನೆಯಲ್ಲಿದಯೊ ?

"ಮೋಹನನ ಹಾದೀನೇ ನೋಡ್ತೀನಿ" ಎಂಬುದರ ಅರ್ಥ, "ನಾನೂ ತಯ್ಯಾರ ಇದ್ದೀನಿ" ಎಂದಲ್ಲವೆ ?....ತನಗೇ ಆಶ್ಚರ್ಯವಾಯಿತು ತಾನು ನುಡಿದದ್ದಕ್ಕಾಗಿ. ನಿಜ, ಯಾವ ಶಬ್ದಗಳಿಗೆ ಯಾವ ಅರ್ಥವನ್ನು ಕಲ್ಪಿಸು ತ್ತಿದ್ದೇನೆ ನಾನು–ಎಂದುಕೊಂಡ. ಮೋಹನನ ಹಾದೀನೇ ನೋಡ್ತೀನಿ

ಎನ್ನುವ ಶಬ್ದಗಳೆಲ್ಲಿ ? ನಾನು ತಯ್ಯಾರ ಇದ್ದೀನಿ–ಎನ್ನುವ ಅರ್ಥವೆಲ್ಲಿ ? ತನಗೆ ಆ ಕಲ್ಪನೆ ಆದರೂ ಹೇಗೆ ಬಂದಿತು ?

ಆದರೂ ತಾನು ಕಲ್ಪಿಸಿದ ಅರ್ಥವೇ ನಿಜ ಎಂದು ರಾಮಣ್ಣ ದೃಢ ವಾಗಿ ನಂಬಿದ. ಯಾಕೆ ? ಆಧಾರವೇನು ? ಕಾರಣಗಳೇನು ?

ಅದೊಂದೂ ನನಗೆ ಗೊತ್ತಿಲ್ಲ, ಆಧಾರವಿಲ್ಲ, ಕಾರಣ–ಕಾರಣವೇ ಬೇಕಿದ್ದರೆ ಹೃದಯದ ಭಾಷೆಯ ಅರ್ಥವನ್ನು ಹೃದಯವೆ ಬಲ್ಲದು, ಬುದ್ಧಿ ಯಲ್ಲ; ವ್ಯಾಕರಣ ನಿಯಮಗಳಲ್ಲ—ಎಂದು ಪ್ರತಿವಾದಿಯನ್ನು ಎದುರಿಸಿದವ ನಂತೆ ಹಟದಿಂದಲೆ ಹೇಳಿಕೊಂಡ.

ತಾನು ತಯ್ಯಾರಾಗಿದ್ದುದನ್ನು ಕುಮುದಳು ತನಗೆ ತಿಳಿಸಿದಳು ಎಂಬ ಆನಂದದ ಭರದಲ್ಲಿ ರಾಮಣ್ಣನಿಗೆ ಏನು ಮಾಡಬೇಕು, ಏನು ಮಾತನಾಡ ಬೇಕು ಎಂಬುದು ತಿಳಿಯದಂತಾಯ್ತು. ನಾನು ಯಾವಾಗಿನಿಂದಲೊ ತಯ್ಯಾರ ಇದ್ದೀನಿ ಅಂತ ಹೇಳಲಿಯಾ ? ಹೇಳು, ಹೇಳು, ಹುಚ್ಚಾ, ಏನನ್ನಾದರೂ ಹೇಳು ; ಇಷ್ಟು ಆತ್ಮೀಯತೆಯಿಂದ ನಿನ್ನೊಡನೆ ಮಾತ ನಾಡಲು ಇಷ್ಟು ವರ್ಷಗಳ ಮೇಲೆ ಮೊದಲ ಸಲ, ತಾನಾಗಿಯೆ ಸಿದ್ಧಳಾ ಗಿದ್ದಾಳೆ, ಏನಾದರೊಂದನ್ನು ಸಮರ್ಪಕವಾಗಿ ಬೊಗಳು—ಎಂದು ತನ್ನನ್ನು ತಾನೇ ರೇಗಿಸಿಕೊಂಡ. ಹಿಂಜರಿಯುವ ತನ್ನನ್ನು ತಾನೇ ಮುಂದೆ ನೂಕು ತ್ತಿರುವನೊ ಎಂಬಂತೆ ಮೆಟ್ಟಿಲುಗಳ ಹತ್ತಿರ ನಡೆದ.

"ಸ್ವಾಗತಸಮಿತಿಯವರೂ ಬರೋ ಹೊತ್ತಾಯ್ತು" ಎಂದ.

ತಟ್ಟನೆ ಕಿಟಕಿಯ ಕಡೆ ನಡೆದ. ಕಿಟಕಿಯ ಹತ್ತಿರ ನಿಂತುಕೊಂಡು. ಮೆಟ್ಟಿಲುಗಳನ್ನೆನೋಡುತ್ತ "ಸ್ವಾಗತಸಮಿತಿಯವರೂ ಬರೋಹೊತ್ತಾಯ್ತು" ಎಂದ ಎರಡನೆಯಸಲ.

## ೧೭

ಕುಮುದಳು ಕಕ್ಕಾವಿಕ್ಕಿಯಾದಳು. "ಸ್ವಾಗತಸಮಿತಿಯವರೂ ಬರೋ ಹೊತ್ತಾಯ್ತು" ಎಂದಿದ್ದನಲ್ಲ ರಾಮಣ್ಣ. ಆ ಮಾತಿನ ಅರ್ಥ ಅವಳಿ ಗಾಯಿತು. "ಸ್ವಾಗತಸಮಿತಿಯವರೂ ಬರೋ ಹೊತ್ತಾಯ್ತು" ಎಂದರೆ.

"ನಾ ತಯಾರಾಗಿದ್ದೇನೆ, ನೀ ತಯಾರಾಗಿದ್ದೀಯಾ ?" ಎಂದು ರಾಮಣ್ಣ ತನಗೆ ಕೇಳಿದ್ದ.

ಕುಮುದಳಿಗೆ ನಗೆ ಬಂದಿತು.

ರಾಮಣ್ಣ ತಯಾರಾಗಿದ್ದಾನೆ ! ತನಗೆ ಗೊತ್ತಿಲ್ಲವೆ ರಾಮಣ್ಣನ ತಯ್ಯಾರಿ ? ಕೋಟು ಹಾಕದ್ದನ್ನು ಮರೆತು ಟೊಪ್ಪಿಗೆಯನ್ನು ಹಾಕಿ ಕೊಳ್ಳುವ ಸ್ವಭಾವ ರಾಮಣ್ಣನದು. ಕುಮುದಳಿಗೆ ಹೆದರಿಕೆಯಾಯಿತು. ನಗೆ ತಡೆಯದೆ ಹೋದರೆ ರಾಮಣ್ಣನಿಗೆ ಕೇಳಿಸಬಹುದಲ್ಲ ? ಆದರೂ ನಗೆ ತಡೆಯದು ಆಕೆಗೆ. ಒಂದು ದಿನ ಯಾವುದೊ ಮಾತಿಗಾಗಿ ಕನಲಿ ಹೊರ ಹೊಂಟಾಗ ಬರಿಮೈಲೆ ಇದ್ದುದನ್ನೆ ಮರೆತು ತಲೆಗೆ ಕೋಟನ್ನು ಸುತ್ತಿ ಕೊಳ್ಳುತ್ತ ಹೊರ ಹೊರಟದ್ದಿತು ಸ್ವಾರಿ ! ಆಯಿತು, ರಾಮಣ್ಣ ತಯಾ ರಾಗಿದ್ದಾನೆ ಎಂದರೆ ಯಾರಾದರೊಬ್ಬರು ಸರಿಯಾಗಿ ಎಲ್ಲ ನೋಡಿಕೊಳ್ಳ ಬೇಕು. ಈ ದಿನವಂತೂ ಮಹತ್ವದ ಸಭೆ ! ಛೆ ! ರಾಮಣ್ಣನಿಗಾಗಿ ತಾನು ತೆಗೆದಿಟ್ಟ ಬಟ್ಟೆಗಳೆ ಯೋಗ್ಯ. ಈಗ ಯಾವನ್ನು ತೊಟ್ಟುಕೊಂಡಿರುವರೊ ಏನೊ ? ತನ್ನದು ಅಂತಹ ತಯ್ಯಾರಿ, ಮೇಲೆ ಮಿಕ್ಕವರಿಗೆ ಅವಸರ ! ತಾನು ತಯ್ಯಾರಾಗಿದ್ದಾಳೊ ಇಲ್ಲೊ ಎಂಬ ಅನುಮಾನ !

ಕುಮುದ ಕನ್ನಡಿಯ ಎದುರು ನಿಂತು ನೋಡಿದಳು. ತಾನು ತಯ್ಯಾ ರಾಗಿದ್ದಾಳೆ. ಸಾರ್ವಜನಿಕರ ಸತ್ಕಾರಕ್ಕೆ ಯೋಗ್ಯನಾದ ರಾಮಣ್ಣನ ಹೆಂಡತಿಗೆ ತಕ್ಕಂತೆ ತಾನು ತಯ್ಯಾರಾಗಿದ್ದಾಳೆ !

"ಸ್ವಾಗತಸಮಿತಿಯವರೂ ಬರೋ ಹೊತ್ತಾಯ್ತು"

ಎರಡನೆಯ ಸಲ ರಾಮಣ್ಣನ ಮಾತು ಕೇಳಿಸಿತು. ಅದೊ ! ನಾನು ಹೇಳಲಿಲ್ಲವೆ ಮಿಕ್ಕವರಿಗಾಗಿ ಅವಸರ ಎಂದು ? ಆದರೂ—ತಾನು ಸಿದ್ಧ ಳಾಗುವ ಬಗ್ಗೆ ಮರೆತಿಲ್ಲ ರಾಮಣ್ಣ ; ಅದೊಂದು ಸುದೈವ ಎನ್ನಬೇಕು ! ಎಲ್ಲ ಗಂಡಸರೂ ಒಂದೇ. ಹೊರಗೆ ಹೊರಡುವುದೆಂದರೆ ಹೊರಡುವುದು ! ತುಸು ಓರಣದಿಂದ ಹೊರಬೀಳಬೇಕು, ಎಲ್ಲಿ ಹೋಗಬೇಕಾಗಿದೆ ಎಂಬು ದನ್ನು ತಿಳಿದು ಅದಕ್ಕೆ ತಕ್ಕಂತೆ ವೇಷ-ಭೂಷಣ ಮಾಡಿ—ಹಗಲೆಲ್ಲ ಅಡುಗೆ —ಬಚ್ಚಲುಮನೆಗಳಲ್ಲಿ ದುಡಿಯುವ ಹೆಂಗಸಿಗೆ ಗೊತ್ತು ಹೊರಗೆ ಹೋಗು ವಾಗ ವೇಷವನ್ನು ಸಜ್ಜುಗೊಳಿಸುವ ಸೊಗಸು.

ಕುಮುದ ಮತ್ತೆ ಕನ್ನಡಿಯಲ್ಲಿ ನೋಡಿಕೊಂಡಳು. ಯಾಕೆ ಅವ ಸರವೊ? ನಾನಂತೂ ತಯ್ಯಾರಾಗಿದ್ದೇನೆ. ಆದರೆ—? ಕುಮುದಳು ದಿಗಿಲುಗೊಂಡಳು. ರಾಮಣ್ಣನಿಗಾಗಿ ತಾನು ಸರಿಯಾದ ಬಟ್ಟೆಗಳನ್ನು ತೆಗೆದಿಟ್ಟಿದ್ದಾಳೆ. ಸಭೆಗೆ ಕರೆಬರುವುದರೊಳಗಾಗಿ ರಾಮಣ್ಣ ಬಟ್ಟೆಯನ್ನು ಬದಲಾಯಿಸಬೇಕು. ನಾನೇ ಹೋಗಿ ಕೊಟ್ಟರೆ? ಕುಮುದಳು ನಡುಗಿದಳು. ತಾನು ಹೋಗುವುದೆ? ಅದರಲ್ಲೂ 'ಆ' ಹೊಸ ಸೀರೆ ಯನ್ನುಟ್ಟು? ಅವಳಿಗೆ ಹೆದರಿಕೆಯಾಯಿತು. ಆದರೆ-ರಾಮಣ್ಣ ಬಟ್ಟೆ ಬದಲಾಯಿಸಲೇಬೇಕು. ಇಲ್ಲವಾದರೆ ಜನ ತನಗೇನೆಂದಾರು? ಮನೆ ಯಲ್ಲಿ ಇಬ್ಬರು ಗಂಡಸರೆಂದರೆ ಇಬ್ಬರು ಹುಡುಗರಿದ್ದಂತೆಯೆ-ಎಂದು ಕೊಂಡಳು ಕುಮುದ. ಇತ್ತ ಮೋಹನನು ತೊಡುವ ಬಟ್ಟೆಗಳ ಕಾಳಜಿಯೂ ತನಗೆಯೆ, ಇತ್ತ ರಾಮಣ್ಣನು ತೊಡುವ ಬಟ್ಟೆಗಳ ಕಾಳಜಿಯೂ ತನಗೆಯೆ. ಇಬ್ಬರದನ್ನೂ ತೆಗೆದಿಟ್ಟು ಸಜ್ಜು ಮಾಡಿದ್ದಾಳೆ.

"ಆಯ್ತು, ಮೋಹನನ ಬಟ್ಟೆ ತಗದಿಟ್ಟೇನಿ" ಎಂದಳು ಕನ್ನಡಿಯಿಂದ ಮುಖ ತಿರುಗಿಸಿ. ನಾಚುತ್ತ ನಾಚುತ್ತ ಮೆಲ್ಲನೆ ಕೆಳಗಿನ ಮೆಟ್ಟಲಿನ ಹತ್ತಿರ ಬಂದು,

"ಆಯ್ತು, ಮೋಹನನ ಬಟ್ಟೆ ತಗದಿಟ್ಟೇನಿ" ಎಂದಳು ಮತ್ತೊಮ್ಮೆ.

## ೧೮

ಕಿಟಕಿಯ ಹತ್ತಿರ ನಿಂತ ರಾಮಣ್ಣ ಹಿಗ್ಗಿನಿಂದ ಮುಖವನ್ನರಳಿಸಿ ಕಿಟಕಿಯಿಂದ ಮುಖವನ್ನು ತಿರುಗಿಸಿದ.

"ಆಯ್ತು, ಮೋಹನನ ಬಟ್ಟೆ ತೆಗೆದಿಟ್ಟೇನಿ"—ಕುಮುದಳ ದನಿ.

ನಗೆಯಿಂದ ಮುಖ ಇನ್ನಿಷ್ಟು ಅಗಲವಾಯಿತು.

ಹೆಂಗಸರ ಸ್ವಭಾವ! ಮನೆಗೆ ಬೆಂಕಿ ಹತ್ತಿದಾಗ ಮನೆಯಿಂದ ಹೊರ ಬೀಳಬೇಕಾದರೂ ಕನ್ನಡಿ ಎದುರು ನಿಂತು ಕೂದಲು ಸಾವರಿಸಿಕೊಳ್ಳುವ ಸ್ವಭಾವ!

ನನ್ನ ಬಟ್ಟೆ ಸರಿಯಾಗಿಲ್ಲ ಎನ್ನುತ್ತಾಳಲ್ಲ! ರಾಮಣ್ಣನಿಗೆ ಹಿಗ್ಗಿನಿಂದ

ವೈ ಉಬ್ಬಿದಂತಾಯಿತು. ಇಂದು ತಾನು ಸರಿಯಾಗಿ ವೇಷವನ್ನು ಮಾಡಿಕೊಳ್ಳಲೇಬೇಕೆಂಬ ಹಟ ಅವಳಿಗೆ. ಪಾಪ ! ಅಂತಹ ಆಸೆ ಯಾಕಿರಬಾರದು ? ತನಗಾಗಿ ಇಷ್ಟೊಂದು ಅಭಿಮಾನವನ್ನು ವಹಿಸುವ ಬೇರೆ ಯಾರು ಇದ್ದಾರೆ ?

"ಮೋಹನನ ಬಟ್ಟೆ ತಗದಿಟ್ಟೇನಿ"

ಎರಡನೆಯ ಸಲ ಕುಮುದಳ ಮಾತನ್ನು ಕೇಳಿ ರಾಮಣ್ಣ ಮೆಟ್ಟಲಿಗೆ ಬಂದ ; ಅಲ್ಲ, ಆ ಮಾತು ಹಗ್ಗದಂತೆ ಅವನನ್ನು ಎಳೆದು ತಂದಿತು. ಅಷ್ಟು ವೇಗದಿಂದ ಮೆಟ್ಟಲಿಗೆ ಬಂದ. ಓಹೊ ! ನಾನು ಕೆಳಗೆ ಬರಬೇಕೆಂದು ಇವಳ ಅಪೇಕ್ಷೆ ! ನನಗಾಗಿ ಬಟ್ಟೆಗಳನ್ನು ತೆಗೆದೇ ಇಟ್ಟಿದ್ದಾಳೆ ! ತನಗೆ ಮೇಲೆ ಬರಲು ನಾಚಿಕೆ. ಯಾಕೆ? ಹುಂ....ಇಂದು ಆಕೆಯ ಸಿಂಗಾರ ಸೊಗಸಾಗಿರಬೇಕು. ಅದಕ್ಕಾಗಿಯೆ ಮೇಲೆ ಬರಲು ನಾಚಿಕೆ. ಅದನ್ನು ನೋಡಲು ತಾನೇ ಕೆಳಗೆ ಹೋಗಬೇಕು. ತಾನೂ ಅದಕ್ಕೆ ತಕ್ಕಂತೆ ಸಜ್ಜಾಗಬೇಕು. ರಾಮಣ್ಣ ಉಸಿರೆಳೆದ ನಾಟಕೀಯವಾಗಿ. "ಯತ್ರ ನಾರ್ಯಸ್ತು ಹೇಳಂತೇ ಸುಂ ಅಂತೇ ತತ್ರ ಮಾನುಷಾಃ" ಹೆಂಗಸರು ಹೇಳುವಾಗ ಗಂಡಸು ಸುಮ್ಮನಾಗಿರಬೇಕು.

ಎಂತಹ ಹುಚ್ಚ ತಾನು ! ತಾನು ಕೆಳಗೆ ಬರಬೇಕು ಎಂದು ಕುಮುದೆ ತನ್ನ ಬಾಯಿಯಿಂದಲೇ ಹೇಳುವಾಗ ತಾನು ಏನನ್ನೊ ಬಡಬಡಿಸುತ್ತ ನಿಂತಿರುವನಲ್ಲ !

ರಾಮಣ್ಣ ಕೈಗಡಿಯಾರವನ್ನು ನೋಡಿಕೊಂಡ. ಅಯ್ದೇ ನಿಮಿಷಗಳುಳಿದಿವೆ ಗೊತ್ತಾದ ಸಮಯಕ್ಕೆ.

" ಎಲ ! ಅಯ್ದೇ ನಿಮಿಷ ಉಳಿದುವಲ್ಲ ? " ಎಂದ ಗಟ್ಟಿಯಾಗಿ. ಕಿಟಕಿಯಿಂದ ಹೊರಗೆ ನೋಡಿದ.

## ೧೯

" ಅಯ್ದೇ ನಿಮಿಷ ಉಳಿದುವಲ್ಲ ? "

ರಾಮಣ್ಣನ ಮಾತನ್ನು ಕೇಳಿ ಕುಮುದ ತನ್ನ ಕೈಗಡಿಯಾರವನ್ನು ನೋಡಿಕೊಂಡಳು.

ಹೌದು. ಮೋಹನ ಬರಲೇ ಇಲ್ಲವಲ್ಲ ? ಅಯ್ದೇ ನಿಮಿಷ ಉಳಿದುವು ಇನ್ನೂ ಮೋಹನ ಬರಲಿಲ್ಲ, ಯಾಕೆ ? —ಎಂದು ರಾಮಣ್ಣ ತನಗೆಯೆ ಕೇಳಿದ ಎಂಬುದು ಕುಮುದಳಿಗೆ ಸ್ಪಷ್ಟವಾಯಿತು. ಅವಸರವಸರದಿಂದ ಸುತ್ತಲೊಮ್ಮೆ ನೋಡಿ ಬಾಗಿಲ ಕಡೆ ಹೊರಟಳು. ಬಾಗಿಲಿಗೆ ಸಮೀಪಿಸಿ ದಾಗ ಎಡಗಡೆ ಮೆಟ್ಟಿಲನ್ನು ನೋಡಿದಳು. ಮೆಟ್ಟಿಲಿನಿಂದ ತುಸು ಅಂತರ ದಲ್ಲಿ ಕಿಟಕಿಯಿಂದ ಹೊರನೋಡುತ್ತಿರುವ ರಾಮಣ್ಣನ ಬೆನ್ನು ಕಾಣಿಸಿತು. ಬರೆಯುವವರಿಗೆ ಬೆನ್ನಿಗೂ ಕಣ್ಣುಗಳಿರುವುದಿಲ್ಲ ಎಂಬುದು ಸುದೈವ ಎನ್ನುತ್ತ ಮೆಲ್ಲನೆ ಹೆಜ್ಜೆಯನ್ನು ಮುಂದಿಟ್ಟಳು, ರಾಮಣ್ಣನನ್ನು ನೋಡುತ್ತಲೆ. ಅಷ್ಟರಲ್ಲಿ ರಾಮಣ್ಣನೂ ಮುಖ ತಿರುಗಿಸಿ "ಮೋಹನ ಬಂದ" ಎಂದ. ಮೋಹನನನ್ನು ನೋಡಿದ ರಾಮಣ್ಣನ ಕಣ್ಣುಗಳಲ್ಲಿ ತಾನೂ ಮೋಹನನನ್ನು ನೋಡಬಯಸುವಳೇನೊ ಎನ್ನುವಂತೆ ದಿಟ್ಟಿಸಿ ರಾಮಣ್ಣನನ್ನು ನೋಡುತ್ತ ನಿಂತಳು. ಹಿಗ್ಗಿನಿಂದ ಅರಳಿದ ಅವನ ಮುಖವನ್ನು ನೋಡಿ ತಾನೂ ಮುಗುಳ್ನಗೆಯನ್ನು ಬೀರಿದಳು. ರಾಮಣ್ಣ ಸರಸರನೆ ಕೆಳಗಿಳಿಯುತ್ತಾನೆ, ಅವನನ್ನು ನೋಡುತ್ತಲೆ ತಾನೂ ಬಲಗೈಯಿಂದ ಬಾಗಿಲನ್ನು ತೆರೆಯಲು ಯತ್ನಿಸಿದಳು. ಚಿಲಕ ಸಿಕ್ಕಲೊಲ್ಲದು.

## ೨೦

ಹೊರಗೆ ಅವಸರದಿಂದ ಬರುವ ಮೋಟಾರ ಕಾರಿನ ಸದ್ದು.

"ಮೋಹನ ಬಂದ" ಎಂದ ರಾಮಣ್ಣ.

"ಕರೀಲಿಕ್ಕೊ ಬಂದರು ಕಾಣ್ತದ" ಎಂದಳು ಕುಮುದ.

ಮೋಟಾರದ ಸದ್ದು ಹತ್ತಿರ ಬಂದಿತು, ಹಾರ್ನ್ ಕೇಳಿಸಿತು, ಯಾರೊ ಕೂಗಿದರು, ಒಮ್ಮೆಲೆ ಬ್ರೇಕ್‌ಹಾಕಿದ ಸದ್ದಿಗಾಗಿ ಪ್ಯೆಗೂದಲು ಸೆಟೆ ದಂತಾಯಿತು, ಕಾರು ನಿಂತಿತು, ಕುಮುದ ಬಾಗಿಲನ್ನು ತೆರೆದಳು.

ಎದುರಿಗೆ ಜನ ನೆರೆದಿದ್ದಾರೆ. ಸದ್ದೆಲ್ಲ ಶಾಂತವಾಗಿದೆ. ಒಮ್ಮೆಲೆ ಜನ ಬದಿಗೆ ಸರಿಯಿತು. ಯಾರೊ ಒಬ್ಬನು ಎರಡೂ ಕೈಗಳಲ್ಲಿ ಏನನ್ನೊ ಕೊಂಡು ಬರುತ್ತಿದ್ದಾನೆ.